ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ— ೨೪

ಪ್ರಧಾನ ಸಂಪಾದಕ

ಕೆ. ವಿ. ಪುಟ್ಟಪ್ಪ, ಎಂ.ಎ.

# ತಮಿಳು ಪಾಠಗಳು




ಸಂಪಾದಕ:

ಎಸ್. ರುದ್ರಪತಿ, ಎಂ.ಎ.

ಮೈಸೂರು

ಮೈಸೂರು ವಿಶ್ವವಿದ್ಯಾನಿಲಯ

೧೯೫೭

# ಮುನ್ನುಡಿ

ಕನ್ನಡದ ವ್ಯಾಸಂಗಕ್ಕೆ ಇತರ ದ್ರಾವಿಡ ಭಾಷೆಗಳ ಪರಿಚಯ ಸಹಾಯವಾಗುತ್ತದೆ. ಅದರಲ್ಲಿಯೂ ಕನ್ನಡ ಭಾಷಾಸಾಹಿತ್ಯಗಳ ಆಳವಾದ ಅಭ್ಯಾಸ ಕೃಷಿಗಳಿಗೆ ತಮಿಳು ಭಾಷಾ ಸಾಹಿತ್ಯಗಳ ತಕ್ಕಮಟ್ಟಿನ ಪರಿಚಯ ಬಹಳ ಸಹಕಾರಿಯಾಗುತ್ತದೆ. ಅಷ್ಟೇ ಅಲ್ಲ, ಆ ಪರಿಚಯ ಆವಶ್ಯಕವೆನ್ನಲೂ ಬಹುದು. ಈ ಕಾರಣದಿಂದ ನಮ್ಮ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರೌಢವ್ಯಾಸಂಗದ ವಿದ್ಯಾರ್ಥಿಗಳು ತೆಲುಗನ್ನೊ ತಮಿಳನ್ನೊ ಕಲಿಯಲು ಏರ್ಪಾಟು ಮಾಡಿದೆ. ಕನ್ನಡ, ತೆಲುಗು, ಮಲೆಯಾಳಗಳ ಮೇಲೆ ನೇರವಾಗಿ ಆಗಿರುವಷ್ಟು ಗಾಢವಾದ ಸಂಸ್ಕೃತದ ಪ್ರಭಾವ ತಮಿಳಿನ ಮೇಲೆ ಆಗಿರದಿದ್ದರೂ, ಆ ಪ್ರಭಾವಕ್ಕೆ ತಮಿಳು ಹೊರಗಾಗಿಲ್ಲ. ಆದರೆ ತಮಿಳಿನ ತನಿಗುಣವೆಂದರೆ ತನ್ನತನವನ್ನು ಹುರುಡಿನಿಂದ ಕಾದುಕೊಂಡು ಬಂದಿರುವುದು. ಹೀಗಾಗಿ, ಅಚ್ಚ ದ್ರಾವಿಡ ಲಕ್ಷಣ ಒಂದಿರುವುದಾದರೆ ಅದು ಮಿಕ್ಕ ದ್ರಾವಿಡ ಭಾಷೆಗಳಿಗಿಂತ ತಮಿಳಿನಲ್ಲಿ ಚೆನ್ನಾಗಿ ಕಂಡುಬರುತ್ತದೆ ಎನ್ನಬಹುದು. ಈ ದೃಷ್ಟಿಯಿಂದಲೂ ಕನ್ನಡ ಪ್ರೌಢ ವಿದ್ಯಾರ್ಥಿಗಳಿಗೆ ತಮಿಳಿನ ಪರಿಚಯ ಉಪಯೋಗವಾಗುತ್ತದೆ. ಇಂಥ ವಿದ್ಯಾರ್ಥಿಗಳ ಆವಶ್ಯಕತೆಯನ್ನು ಗಮನಿಸಿ ಈ ಸಂಕಲನವನ್ನು ಏರ್ಪಡಿಸಿದೆ. ತಮಿಳು ಸಾಹಿತ್ಯದ ಬೇರೆ ಬೇರೆ ಪ್ರಕಾರಗಳ ಪ್ರಾತಿನಿಧ್ಯ ಬರುವಂತೆ ಆಯ್ಕೆ ಮಾಡಿದೆ. ಈ ಸಂಕಲನದಿಂದ ಹಕ್ಕಿನೋಟದ ಸ್ಥೂಲಪರಿಚಯ ಮಾತ್ರ ಆಗುತ್ತದೆಯೇ ಹೊರತು ಬೇರೆಯಲ್ಲ. ಇದು ಪ್ರವೇಶಿಕೆ ಮಾತ್ರ. ಆಳವೂ ವಿಸ್ತಾರವೂ ಆದ ತಮಿಳು ವ್ಯಾಸಂಗಕ್ಕೆ ಬೇರೆ ಮಾರ್ಗ, ಬೇರೆ ಸಾಧನಗಳು ಇವೆ. ತಮಿಳು ಸಾಹಿತ್ಯ ಚರಿತ್ರೆಯ ಲಘುಪರಿಚಯವನ್ನೂ ಹಾಗೆಯೇ ತಮಿಳು ಛಂದಸ್ಸಿನ ಲಘುಪರಿಚಯವನ್ನೂ ಪೀಠಿಕೆಯಲ್ಲಿ ಮಾಡಿಕೊಡಲು ಪ್ರಯತ್ನಪಟ್ಟಿದೆ.

ಈ ಸಂಕಲನ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರ ಪ್ರೇರಣೆ, ಉತ್ತೇಜನ, ಮಾರ್ಗದರ್ಶನಗಳಿಂದ ನೆರವೇರಿದೆ. ಆ ಹಿರಿಯರ ಆಸೆ ಇಂದಾದರೂ ಕೈಗೂಡಿದ್ದಕ್ಕೆ ನಾವು ಸಂತೋಷಪಡಬೇಕಾಗಿದೆ. ಈ ಸಂಕಲನದ ಭಾರವನ್ನು ವಹಿಸಿದ ಶ್ರೀ ಎಸ್. ರುದ್ರಪತಿಗಳಿಗೆ ನಮ್ಮ ವಂದನೆ ಸಲ್ಲತಕ್ಕದ್ದಾಗಿದೆ.

ಮೈಸೂರು,
ತಾ॥ ೧೪–೪–೧೯೫೧.

**ಕೆ. ವಿ. ಪುಟ್ಟಪ್ಪ,**
ಸಮಿತಿಯ ಅಧ್ಯಕ್ಷರು.

# ಬಿನ್ನಹ

ಕನ್ನಡಕ್ಕೂ ತಮಿಳಿಗೂ, ಅದರಲ್ಲಿಯೂ ಹಳಗನ್ನಡಕ್ಕೂ ತಮಿಳಿಗೂ, ಇರುವ ನಿಕಟ ಸಂಬಂಧ ಭಾಷಾ ಶಾಸ್ತ್ರದ ಅಲ್ಪಸ್ವಲ್ಪ ಪರಿಚಯ ಇರುವವರಿಗೆ ಕೂಡ ತಿಳಿದಿದೆ. ಕನ್ನಡ ಭಾಷೆಯ ಅಭ್ಯಾಸಿಗಳಿಗೆ ತಮಿಳಿನ ಪರಿಚಯ ಪ್ರಯೋಜನಕಾರಿ ಮಾತ್ರವಲ್ಲ, ಅಗತ್ಯವೆಂದೂ ಹೇಳಬಹುದು. ಈ ಕಾರಣದಿಂದಲೇ, ಕನ್ನಡ ಆನರ್ಸ್ ವಿದ್ಯಾರ್ಥಿಗಳು ತಮಿಳು ಕಲಿಯಲು ಅವಕಾಶ ಕಲ್ಪಿಸಿದೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಆನರ್ಸ್ ಪರೀಕ್ಷೆಗೆ ತಮಿಳನ್ನು ದ್ವಿತೀಯ ದ್ರಾವಿಡ ಭಾಷೆಯಾಗಿ ತೆಗೆದುಕೊಂಡು ಓದುವ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ತಮಿಳು ಪಾಠ ಸಂಕಲನವೊಂದನ್ನು ಸಿದ್ಧಪಡಿಸಬೇಕೆಂದು ವಿಶ್ವವಿದ್ಯಾನಿಲಯದವರು ಉದ್ದೇಶಪಟ್ಟು ಆ ಕೆಲಸವನ್ನು ನನಗೆ ವಹಿಸಿ ಗೌರವಿಸಿದ್ದಾರೆ. ಈ ಉದ್ದೇಶ ಉದ್ಯಮಗಳಿಗೆ ಮೂಲ ಪ್ರೇರಕರೂ ಸತತ ಪ್ರೋತ್ಸಾಹಕರೂ ಆದವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಹಿರಿಯ ಇಂಗ್ಲಿಷ್ ಪ್ರೊಫೆಸರೂ ಕನ್ನಡದ ಗೌರವ ಪ್ರೊಫೆಸರೂ ಆಗಿದ್ದ ದಿವಂಗತರಾದ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು. ಈ ಆಚಾರ್ಯರ ತಮಿಳು ಪಾಂಡಿತ್ಯವನ್ನು ಪ್ರಸಿದ್ಧ ತಮಿಳು ವಿದ್ವಾಂಸರುಗಳು ಕೊಂಡಾಡಿರುವುದರಿಂದ ಇಲ್ಲಿ ನಾನು ಏನನ್ನೂ ಹೇಳ ಹೋಗುವುದಿಲ್ಲ. ಈ ಸಂಕಲನದ ಪಾಠಗಳ ಆಯ್ಕೆಯನ್ನು ಮೊದಲಿಂದ ಕೊನೆಯವರೆಗೆ ನೋಡಿ ಶ್ರೀಯವರು ತಮ್ಮ ಒಪ್ಪಿಗೆ ಕೊಟ್ಟಿದ್ದರು. ಪುಸ್ತಕ ಅಚ್ಚಾಗುವುದರೊಳಗೇ ಅವರು ನಮ್ಮನ್ನು ಅಗಲಿದ್ದು ಮುಖ್ಯವಾಗಿ ನನ್ನ ದೌರ್ಭಾಗ್ಯ. ಈ ಸಂಕಲನದ ಕೆಲಸದಲ್ಲಿ ಪೂಜ್ಯ ಶ್ರೀಯವರ ಮಹೋಪಕಾರವನ್ನು ನೆನೆಯುವುದು ನನ್ನ ಮೊಟ್ಟಮೊದಲನೆಯ ಕರ್ತವ್ಯ.

ಆಗ ಮೈಸೂರು ವಿಶ್ವವಿದ್ಯಾನಿಲಯದ ರೆಜಿಸ್ಟ್ರಾರರೂ ತಮಿಳು ಪಾಠ ಸಮಿತಿಯ ಅಧ್ಯಕ್ಷರೂ ಆಗಿದ್ದ ಶ್ರೀ ವಿ. ಗೋಪಾಲಸ್ವಾಮಿ ಅಯ್ಯಂಗಾರ್, ಎಂ.ಎ. ಅವರು ಉದ್ದಕ್ಕೂ ಉಪಯುಕ್ತವಾದ ಸಲಹೆ

ಗಳನ್ನು ಕೊಟ್ಟು ಉಪಕಾರಮಾಡಿದ್ದಾರೆ. ಕನ್ನಡ ಪ್ರಕಟನ ಸಮಿತಿಯ ಅಧ್ಯಕ್ಷರಾಗಿದ್ದ ಶ್ರೀ ಎ. ಆರ್. ಕೃಷ್ಣಶಾಸ್ತ್ರಿ, ಎಂ.ಎ. ಅವರು ಆಗಾಗ್ಗೆ ಸೂಕ್ತ ಸಲಹೆಗಳನ್ನು ಕೊಟ್ಟು ಸಹಾಯಮಾಡಿದ್ದಾರೆ. ಮೊದಲಿನ ಸಾಮಾನ್ಯ ಪೀಠಿಕೆಯನ್ನು ಕನ್ನಡದಲ್ಲಿ ಬರೆದುಕೊಟ್ಟ ನನ್ನ ಮಿತ್ರರಾದ ಶ್ರೀ ಕೆಡಂಬ ದೊರೆಸ್ವಾಮಿಯವರಿಗೂ ಒಂದೊಂದು ಪಾಠಕ್ಕೂ ಕೊಟ್ಟಿರುವ ವಿಶೇಷ ಪೀಠಿಕೆಗಳನ್ನೂ ಶಬ್ದಕೋಶವನ್ನೂ ಕನ್ನಡದಲ್ಲಿ ಸಿದ್ಧಪಡಿಸಿ ಕೊಟ್ಟು ನೆರವಾಗಿರುವ ನನ್ನ ಮಿತ್ರರಾದ ಶ್ರೀ ಕ. ವೆಂ. ರಾಘವಾಚಾರ್ಯ, ಎಂ.ಎ., ಬಿ.ಟಿ. ಅವರಿಗೂ ಶ್ರೀ ಎಲ್. ಗುಂಡಪ್ಪ, ಎಂ.ಎ. ಅವರಿಗೂ ನಾನು ಕೃತಜ್ಞನಾಗಿದ್ದೇನೆ. ಈ ನನ್ನ ಕಿರಿಯ ಸೇವೆಗೆ ಅವಕಾಶಕೊಟ್ಟ ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಕನ್ನಡ ಆನರ್ಸ್ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಈ ಸಂಕಲನ ಯೋಜಿತವಾಗಿದ್ದರೂ ತಮಿಳು ಓದುವ ಆಸೆಯುಳ್ಳ ಇತರ ಕನ್ನಡಿಗರಿಗೂ ಇದರಿಂದ ಕೊಂಚಮಟ್ಟಿಗಾದರೂ ಸಹಾಯವಾದರೆ ನನ್ನ ಶ್ರಮ ಸಾರ್ಥಕವೆಂದು ಭಾವಿಸುತ್ತೇನೆ.

ಬೆಂಗಳೂರು,
ತಾ॥ ೨೨–೬–೧೯೪೭.

ಎಸ್. ರುದ್ರಪತಿ.

# ಒಳಪಿಡಿ

## ಪೀಠಿಕೆ

"ತಮಿಳು"ಎಂಬ ಪದವು "ದ್ರಾವಿಡ"ಎಂಬ ಶಬ್ದದ ರೂಪಾಂತರ ವೆಂದು ಹೇಳುತ್ತಾರೆ. ಇದು ಸರಿಯಲ್ಲ. ಭಾಷೆ ಹುಟ್ಟಿದಾಗಲೇ ಅದರ ಹೆಸರೂ ಜೊತೆಯಲ್ಲಿಯೇ ಹುಟ್ಟುವುದು ಸ್ವಾಭಾವಿಕ. ಇತರ ನುಡಿ ಗಳನ್ನಾಡುವವರು ತಮಿಳನ್ನು ದ್ರಾವಿಡ ಭಾಷೆಯೆಂದು ಹೆಸರಿಟ್ಟು ಕರೆದರೇ ಹೊರತು ತಮಿಳರೇ ಇದನ್ನು ದ್ರಾವಿಡವೆಂದು ಕರೆದಿಲ್ಲ. "ತಮಿೞ್" ಎಂಬ ಪದದಲ್ಲಿ ಸ್ವರ ಮೊದಲುಗೊಂಡು (ಉಯಿರ್‌ಗಣ), ಕರ್ಕಶವರ್ಣ (ವಲ್ಲಿನಮ್), ಮೃದುವರ್ಣ (ಮೆಲ್ಲಿನಮ್), ಮಧ್ಯವರ್ಣ (ಇಡೈಯಿನಮ್)–ಇವುಗಳು ಸೇರಿರುವುದರಿಂದಲೇ ಈ ಭಾಷೆಗೆ 'ತಮಿಳು' ಎಂಬ ಒಪ್ಪುವ ಹೆಸರಾಗಿ ಮೇಲಿನ ಅಭಿಪ್ರಾಯವನ್ನು ಸಮರ್ಥಿಸು ತ್ತದೆ. "ತಮಿೞ್" ಎಂದರೆ "ಇನಿದು" ಅಥವಾ "ಮಧುರ" ಎಂದರ್ಥ.

ತಿರುವಿಳೈಯಾಡಲ್ ಪುರಾಣಕರ್ತರಾದ ಪರಂಜ್ಯೋತಿಯಾರರು, ಕವಿಚಕ್ರವರ್ತಿ ಕಂಬರು ಮುಂತಾದ ಮಹಾಕವಿಗಳ ಅಭಿಪ್ರಾಯದಲ್ಲಿ ತಮಿಳಿಗೆ ಪರಶಿವನೇ ಪರಮಾಚಾರ್ಯನೆಂದೂ, ಅಧಿದೇವತೆಯೆಂದೂ ತಿಳಿದುಬರುತ್ತದೆ. ಇದಕ್ಕೆ ಸಹಾಯಕವಾಗಿ ಆದಿಕಾಲದಲ್ಲಿ ಪೂರ್ವಾ ಚಾರ್ಯರುಗಳು ತಮಿಳಿನ ವರ್ಣಮಾಲೆಯನ್ನು ತಮ್ಮ ಶಿಷ್ಯರಿಗೆ ಉಪದೇಶಿಸುವುದಕ್ಕೆ ಮೊದಲು "ನಮಶ್ಶಿವಾಯ" ಎಂಬ ಪಂಚಾಕ್ಷರಿ ಮಂತ್ರವನ್ನು ತಾಳಪತ್ರದ ಮೇಲೆ ಬರೆದು, ಅನಂತರ ಪಾಠಪ್ರವಚನಕ್ಕೆ ತೊಡಗುತ್ತಿದ್ದರು. ಅಂದರೆ ಈ ಭಾಷೆಗೆ ಪರಶಿವನೇ ಅಧಿದೇವತೆ ಯೆಂಬುದು ಇದರಿಂದ ಗೊತ್ತಾಗುತ್ತದೆ. ಆದರೆ ಕೆಲವರು ಪರಶಿವನ ಮಗನಾದ ಷಣ್ಮುಖನೇ ತಮಿಳಿಗೆ ಅಧಿದೇವತೆಯೆಂದೂ, ಅವನೇ ಮೊದಲು ಅಗಸ್ತ್ಯಮಹರ್ಷಿಗೆ ಈ ಭಾಷೆಯನ್ನು ಉಪದೇಶಿಸಿದನೆಂದೂ ಅಭಿಪ್ರಾಯಪಡುತ್ತಾರೆ.

ತಮಿಳು ತೆಂಕಣ ನುಡಿ; ಸಂಸ್ಕೃತ ಬಡಗಣ ನುಡಿ; ಆದ್ದರಿಂದಲೇ ತಮಿಳಿಗೆ "ತೆನ್ಮೊೞಿ" (ತೆನ್–ತೆಂಕಣ, ಮೊೞಿ–ಮಾತು), ಸಂಸ್ಕೃತಕ್ಕೆ

"ವಡಮೊೞಿ" (ವಡಕ್ಕು—ಬಡಗಣ, ಮೊೞಿ—ಮಾತು) ಎಂಬ ರೂಢ ನಾಮಗಳಾಗಿವೆ. ಇವೆರಡು ನುಡಿಗಳನ್ನೂ ಪರಮಾತ್ಮ ಸ್ವರೂಪವೆಂದು ಭಾವಿಸಿ ಕೊಂಡಾಡುವುದು ತಮಿಳರ ವೈಶಿಷ್ಟ್ಯ:

"ಆರಿಯನ್ ಕಣ್ಡಾಯ್ ತಮಿೞನ್ ಕಣ್ಡಾಯ್"
[(ಪರಮಾತ್ಮ ಸ್ವರೂಪವಾದ ಸಂಸ್ಕೃತ) ಆರ್ಯಭಾಷೆಯನ್ನು ಕಂಡೆ, ತಮಿಳನ್ನು ಕಂಡೆ.]

"ತೇವಾರಮ್"

ದಿವ್ಯ ಪ್ರಬಂಧದಲ್ಲಿಯೂ ಇದೇ ರೀತಿಯಲ್ಲಿ ತಮಿಳು ನುಡಿಯನ್ನು ದೈವ ವೆಂದು ಭಾವಿಸಿ ಹಾಡಿರುವ ಸನ್ನಿವೇಶಗಳು ಹಲವಿವೆ.

## ಸಂಘಕಾಲ

'ಶಙ್ಗಮ್' (=ಸಂಘ) ಎಂದರೆ ವಿದ್ವದ್ಗೋಷ್ಠಿ ಅಥವಾ ವಿದ್ವಾಂಸರ ಕೂಟವೆಂದರ್ಥ. ತಮಿಳುನಾಡಿನ ಹಲವು ರಾಜಧಾನಿಗಳಲ್ಲಿಯೂ, ಅಲ್ಲಲ್ಲಿಯ ಸಣ್ಣ ಪುಟ್ಟ ಹಳ್ಳಿಗಳಲ್ಲಿಯೂ ಬಾಳಿದ ತಮಿಳು ವಿದ್ವಾಂಸರ ಕೂಟಗಳಿಗೆ ಈ ಹೆಸರು ಮುಂಚಿನಿಂದಲೂ ವಾಡಿಕೆಯಾಗಿದ್ದರೂ ದಕ್ಷಿಣ ಮಧುರೆಯಲ್ಲಿದ್ದ ಸಂಘಕ್ಕೆ ಇದೊಂದು ವಿಶಿಷ್ಟನಾಮವಾಗಿ ಅನ್ವಯಿಸುತ್ತದೆ. ಶಿವ, ವಿಷ್ಣು, ಷಣ್ಮುಖ ಮುಂತಾದ ದೇವತೆಗಳೂ, ಹಿರಿಯರೂ, ದೇವಾಂಶ ಸಂಭೂತರಾದ ಪಾಂಡ್ಯರಾಜರೂ ಈ ನುಡಿಯನ್ನು ಬಹಳ ಪ್ರೀತಿಯಿಂದ ಪರಿಪಾಲಿಸಿಕೊಂಡು ಬಂದದ್ದರಿಂದಲೇ ಈ ಸಂಘಕ್ಕೆ ಇಷ್ಟು ಪ್ರಾಶಸ್ತ್ಯ, ಗೌರವ ಏರ್ಪಟ್ಟವು. ತಮಿಳು 'ಸಂಘ'ಕ್ಕೆ ಚೇರ ಚೋಳ ಪಾಂಡ್ಯ ವಂಶಗಳ ಅರಸರು ಮಹಾಪೋಷಕರಾಗಿದ್ದರೂ ಪಾಂಡ್ಯ ರಾಜರೇ ವಿಶೇಷವಾಗಿ ಇದಕ್ಕೆ ನೆಲೆಮಾಡಿಕೊಟ್ಟು ಪೋಷಿಸಿದ್ದರಿಂದ ಅವರು ಜನದ ಮೆಚ್ಚಿಗೆ ಪಾತ್ರರಾದರು.

ಪಾಂಡ್ಯರಾಜರ ಆಳಿಕೆಯಲ್ಲಿ ಮಧುರೆಯಲ್ಲಿ ಮೊದಲ ಸಂಘ, ನಡುವಣ ಸಂಘ, ಕೊನೆಯ ಸಂಘ ಎಂಬ ಮೂರು ಸಂಘಗಳು ಇದ್ದು ವೆಂದೂ, ಒಂದೊಂದಕ್ಕೂ ಹಲವು ವರ್ಷಗಳ ಅಂತರವಿತ್ತೆಂದೂ ಹೇಳುತ್ತಾರೆ. ಒಂದೊಂದು ಸಂಘಕಾಲದಲ್ಲಿಯೂ ಹಲವರು ಉದ್ದಾಮ

ಕವಿಗಳು, ಪಂಡಿತರು ಇದ್ದರು. ಪ್ರಾಚೀನ ತಮಿಳು ಕವಿಗಳೆಲ್ಲಾ ಈ ಯಾವುದಾದರೊಂದು ಸಂಘಕ್ಕೆ ಸೇರಿಯೇ ಇರುತ್ತಾರೆ. ಆದರೆ ಮೊದಲ ಮತ್ತು ನಡುವಣ ಸಂಘಗಳ ವಿಚಾರ ನಮಗೆ ಹೆಚ್ಚಾಗಿ ತಿಳಿಯದು. ಇವೆರಡು ಕಾಲಗಳಿಗೆ ಸೇರಿದ ಕೆಲವರು ಕವಿಗಳ, ಗ್ರಂಥಗಳ ಹೆಸರುಗಳು ಮಾತ್ರ ಇತ್ತೀಚೆಗೆ ಗೊತ್ತಾಗಿವೆ; ಆ ಕವಿಗಳ ಜೀವನ ಚರಿತ್ರೆಯಾಗಲಿ, ಸಮಗ್ರ ಮೂಲ ಗ್ರಂಥಗಳಾಗಲಿ ನಮಗೆ ಸಿಕ್ಕಿಲ್ಲ; ಕಾಲದ ಒಡಲಿನಲ್ಲಿ ಮುಳುಗಿ ಮರೆಯಾಗಿವೆ. ಆದರೆ ಆ ಗ್ರಂಥ ಗಳಿಂದ ಎತ್ತಿದ ಹಲಕೆಲವು ಬಿಡಿ ಸೂತ್ರಗಳು, ಪದ್ಯಗಳು, ಪದ್ಯ ಭಾಗ ಗಳು ಲಕ್ಷ್ಯ ಲಕ್ಷಣರೂಪದಲ್ಲಿ "ತೊಲ್‌ಕಾಪ್ಪಿಯಮ್" ಮೊದಲಾದ ಹಳೆಯ ಗ್ರಂಥಗಳಲ್ಲಿ ಉದ್ಧೃತವಾಗಿವೆ. "ಪೇರಗತ್ತಿಯತ್ತಿರಟ್ಟು" ಎಂಬ ಮೂಲಗ್ರಂಥದ ಸಂಗ್ರಹವೊಂದು ಈಗ ಪ್ರಚಾರದಲ್ಲಿದೆ.

ಮೊದಲ ಸಂಘ ಪ್ರಥಮಪ್ರಳಯಾಂತ್ಯದಲ್ಲಿ ದಕ್ಷಿಣಮಧುರೆ ಯಲ್ಲಿತ್ತೆಂದೂ, ನಡುವಣ ಸಂಘ ಎರಡನೆಯ ಪ್ರಳಯಕಾಲದಲ್ಲಿ ಕಪಾಟ ಪುರದಲ್ಲಿತ್ತೆಂದೂ, ಕೊನೆಯ ಸಂಘ ಈಗಿನ ಮಧುರೆಯಲ್ಲಿ ಪ್ರಸಿದ್ಧವಾಗಿ ತ್ತೆಂದೂ ಹೇಳುತ್ತಾರೆ. ವಾಲ್ಮೀಕಿ ರಾಮಾಯಣದಲ್ಲಿ ನಡುವಣ ಸಂಘಕ್ಕೆ ತವರಾಗಿದ್ದ ಕಪಾಟಪುರವನ್ನು ಸ್ಮರಿಸಿದ್ದಾರೆ.

**ಅಗಸ್ತ್ಯರು.**—ಸಂಸ್ಕೃತಕ್ಕೆ ಪಾಣಿನಿ, ತೆಲುಗಿಗೆ ಕಣ್ವರು ಹೇಗೋ ಹಾಗೆ ಅಗಸ್ತ್ಯರು ತಮಿಳಿಗೆ ಮೂಲಪುರುಷರು. ಇವರು ಮೊದಲೆರಡು ಸಂಘ ಕಾಲಗಳಲ್ಲಿ ಇದ್ದಂತೆ ತೋರುತ್ತದೆ. ಗಿರಿಜಾ ಕಲ್ಯಾಣದ ವೈಭವವನ್ನು ಕಣ್ಣಾರ ಕಂಡು ಆನಂದಿಸಲು ಸರ್ವರೂ ಕೈಲಾಸದಲ್ಲಿ ನೆರೆಯಲು ಬಡಗಿನಲ್ಲಿ ಭಾರ ಹೆಚ್ಚಾಗಿ ಭರತಖಂಡ ಸ್ವಲ್ಪಮಟ್ಟಿಗೆ ಏರು ಪೇರಾದ್ದರಿಂದ ಪರಶಿವನ ಕಟ್ಟಪ್ಪಣೆಯ ಪ್ರಕಾರ ಅಗಸ್ತ್ಯಮಹರ್ಷಿಗಳು ವಿಂಧ್ಯಗಿರಿಯನ್ನು ದಾಟಿ ತೆಂಕಣ ಪೊದಿಯ ಮಲೆಗೆ ಬಂದು ಭಾರತವನ್ನು ಸಮತೂಕವಾಗಿ ನಿಲ್ಲಿಸಿದರೆಂದು ಪುರಾಣ ಪ್ರಸಿದ್ಧವಾಗಿದೆ. ಇವರು ಇಲ್ಲಿ ಬಂದು ನೆಲಸಿದಮೇಲೆ "ಪೇರಗತ್ತಿಯಮ್" ಎಂಬ ಲಕ್ಷಣ ಗ್ರಂಥ ವನ್ನು ಬರೆದರು. ಆದರೆ "ಪ್ರಯೋಗ ಶರಣಾಃ ವೈಯಾಕರಣಾಃ" ಎಂಬಂತೆ ಲಕ್ಷ್ಯದಿಂದ ಲಕ್ಷಣ ಹುಟ್ಟಬೇಕು. ಇಲ್ಲಿಗೆ ಅಗಸ್ತ್ಯರ

ಆಗಮನಕ್ಕೆ ಮುಂಚಯೇ ತಮಿಳು ಸಾಹಿತ್ಯ ಅತ್ಯುಚ್ಚಸ್ಥಾನ ಪಡೆ ದಿತ್ತೆಂಬುದು ಇದರಿಂದ ಸ್ವಯಂವೇದ್ಯವಾಗುತ್ತದೆ. ಇವರ ಶಿಷ್ಯರು ಹನ್ನೆರಡು ಮಂದಿ. ಒಬ್ಬೊಬ್ಬರೂ ಒಂದೊಂದು "ಪಟಲ" ಅಥವಾ ದಳದಂತೆ ಹನ್ನೆರಡು ಪಟಲಗಳುಳ್ಳ "ಪನ್ನಿರು ಪಡಲಮ್" ಎಂಬ ತಮಿಳು ವ್ಯಾಕರಣ ಗ್ರಂಥವೊಂದನ್ನು ರಚಿಸಿದರು. ಇದು ಈಗಲೂ ಪ್ರಚಾರದಲ್ಲಿದೆ.

**ತೊಲ್‌ಕಾಪ್ಪಿಯರ್.**—ಇವರು ಅಗಸ್ತ್ಯರ ಪ್ರಥಮಶಿಷ್ಯರು. "ತೊಲ್‌ಕಾಪ್ಪಿಯಮ್" ಎಂಬ ಲಕ್ಷಣ ಗ್ರಂಥವನ್ನು ಬರೆದರು. ಇವರ ಸಹಪಾಠಿಗಳಾದ ಪನಮ್ಬಾರನಾರ್ ಈ ಗ್ರಂಥವನ್ನು ಕುರಿತು ವಿಮರ್ಶಾತ್ಮಕ ಪದ್ಯ (ಪಾಯಿರಮ್)ವೊಂದನ್ನು ಹೇಳಿದ್ದಾರೆ. ಇನ್ನೊಬ್ಬ ಸಹಪಾಠಿಗಳಾದ ಅದಙ್ಕೋಟ್ಟಾಶಿರಿಯರು ತೊಲ್‌ಕಾಪ್ಪಿಯವನ್ನು ವಿದ್ವದ್ಗೋಷ್ಠಿಯ ಅಂಗೀಕಾರ (ಅರಙ್ಗೇಱ್ಱುದಲ್)ಕ್ಕೆ ಒಪ್ಪಿಸಿದ ಕಾಲದಲ್ಲಿ ಬಹಳವಾಗಿ ಕೊಂಡಾಡಿದ್ದಾರೆ.

ಪೇರಗತ್ತಿಯದಲ್ಲಿ ತಮಿಳು ಸಾಹಿತ್ಯವನ್ನು ಕಾವ್ಯ (ಇಯಲ್), ಸಂಗೀತ (ಇಶೈ), ನಾಟಕ (ನಾಡಕಮ್) ಎಂಬ ಮೂರು ಭಾಗವಾಗಿ ವಿಂಗಡಿಸಿರುವುದನ್ನು ಕಾಣಬಹುದು. ಆದರೆ ತೊಲ್‌ಕಾಪ್ಪಿಯದಲ್ಲಿ ಅಕ್ಷರ (ಎೞುತ್ತು), ಮಾತು (ಶೊಲ್), ಅರ್ಥ (ಪೊರುಳ್) ಎಂಬ ಮೂರು ಅಧಿಕಾರಗಳಲ್ಲಿ ಕಾವ್ಯಲಕ್ಷಣ (ಇಯಲ್ ತಮಿೞಿಲಕ್ಕಣಮ್) ಉಕ್ತವಾಗಿದೆ. ಈ ಅಧಿಕಾರಗಳಲ್ಲಿ ಒಂದೊಂದಕ್ಕೂ ಒಂಬತ್ತು ಅಧ್ಯಾಯ ಗಳಿವೆ. ಅರ್ಥಾಧಿಕಾರ (ಪೊರುಳದಿಕಾರ)ದಲ್ಲಿ ಯಾಪ್ಪು (ಛಂದಸ್ಸು), ಅಣಿ (ಅಲಂಕಾರ)ಗಳು ಅಡಕವಾಗಿವೆ. ನಮಗೆ ಈಗ ಸಿಕ್ಕಿರುವ ಗ್ರಂಥ ಗಳಲ್ಲಿ ತೊಲ್‌ಕಾಪ್ಪಿಯವೇ ಬಹು ಪ್ರಾಚೀನವಾದುದು. ಇದರ ಕರ್ತೃ ವಾದ ತೊಲ್‌ಕಾಪ್ಪಿಯರು ಜಮದಗ್ನಿಪುತ್ರನಾದ ತೃಣಧೂಮಾಗ್ನಿಯೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಇವರಿಗೆ ತೃಣಬಿಂದು ಎಂಬ ಮತ್ತೊಂದು ಹೆಸರೂ ಇದ್ದಂತೆ ಕಾಣುತ್ತದೆ.

**ಸಂಘ ಗ್ರಂಥಗಳು.**—ತಮಿಳು ಸಾಹಿತ್ಯವನ್ನು ಮೂರು ವಿಭಾಗ ಗಳಾಗಿ ವಿಂಗಡಿಸಬಹುದು: ೧ ಕಾವ್ಯ (ಇಯಲ್); ೨ ಸಂಗೀತ

(ಇಶೈ); ೩ ನಾಟಕ (ನಾಡಗಮ್). ಇಯಲ್ ಗುಂಪಿನಲ್ಲಿ ಕಾವ್ಯಗಳು ಹಲವು. ನಮಗೆ ಉಪಲಬ್ಧವಾಗಿರುವ ಕಾವ್ಯಗಳು ಎಟ್ಟುತ್ತೊಗೈ, ಪತ್ತುಪ್ಪಾಟ್ಟು, ಪದಿನೆಣ್ ಕೀೞ್ಕಣಕ್ಕು ಎಂದು ಮೂರು ಬಗೆಯಾಗಿವೆ. ಇಶೈ ಎಂದರೆ ಸಂಗೀತ ಭಾಗದಲ್ಲಿ ಪ್ರಾಚೀನ ಕೃತಿಗಳು ಈಗ ಸಿಕ್ಕುವಂತಿಲ್ಲ. ಇಶೈ ನುಣುಕ್ಕಮ್, ಪೆರುನಾರೈ, ಇಂದ್ರಕಾಳಿಯಮ್, ಪಂಞ್ಚ ಮರಬು, ಪೆರುಙ್ಗುರುಗು ಇವೇ ಮೊದಲಾದ ಸಂಗೀತ ಶಾಸ್ತ್ರ ಗ್ರಂಥಗಳ ಹೆಸರು ಮಾತ್ರ ನಮ್ಮ ಪಾಲಿಗೆ ಉಳಿದಿವೆ. ಹೀಗೆಯೇ ಮುಱುವಲ್, ಶಯನ್ದಮ್, ಶೆಯುಱ್ಱಿಯಮ್, ಕುಣನೂಲ್, ಮದಿವಾಣಮ್ ಮುಂತಾದ ನಾಟಕ ಲಕ್ಷಣ ಗ್ರಂಥಗಳೂ ನಾಮಾವಶೇಷವಾಗಿವೆ.

**ಕಾವ್ಯ(ಇಯಲ್ ನೂಲ್).**—ಸಂಘಕಾಲದ ತಮಿಳು ಗ್ರಂಥಗಳಲ್ಲಿ 'ಅಗಮ್', 'ಪುಱಮ್' ಎಂಬೆರಡು ಪ್ರಸಿದ್ಧ ಸಾಹಿತ್ಯ ರೂಪಗಳುಂಟು. 'ಅಗಮ್' ಎಂದರೆ ಮಾನವನ ಆಂತರಿಕ ಪ್ರೇಮ. ಇದು ಅವನ ಹೃದಯ ತಳದಲ್ಲಿಯೇ ಅಡಗಿರುತ್ತದೆ. ಇದನ್ನು ಮಾತಿನ ಮೂಲಕ ಹೊರಪಡಿಸುವುದು ಕಷ್ಟ. ಈ ಆಂತರಿಕ ಪ್ರೇಮದಲ್ಲಿ ನಾಯಕನಾಯಿಕೆಯರಿಗೆ ಉಂಟಾಗುವ ಪ್ರೇಮ (ಕಾದ಼ಲು)ವೇ, [ಎಂದರೆ, ಶೃಂಗಾರವೇ] ಬಹುಶ್ರೇಷ್ಠವಾದುದು. ಆದ್ದರಿಂದ 'ಅಗಮ್' ಎಂದೊಡನೆ ಶೃಂಗಾರಕ್ಕೆ ಅನ್ವಯಿಸುತ್ತದೆ. 'ಪುಱಮ್' ಹೊರನೋಟಕ್ಕೆ ಕಾಣುವ ವಿದ್ಯೆ, ದಾತೃತ್ವ, ಪರಾಕ್ರಮ ಮೊದಲಾದ ಸ್ತೋತ್ರಾರ್ಹವಾದ ವಿಷಯಗಳನ್ನು ಸೂಚಿಸುತ್ತದೆ; ಅಂದರೆ ಕಾಮವನ್ನು ಹೊರತು ಧರ್ಮ ಅರ್ಥಗಳನ್ನು ಕುರಿತ ಸಾಹಿತ್ಯ ರೂಪವೆನ್ನಬಹುದು. ಈ ಎರಡು ಬಗೆಯ ಸಾಹಿತ್ಯದಲ್ಲಿ ಹಲವು ಗ್ರಂಥಗಳಿವೆ. ಇವುಗಳಲ್ಲಿ 'ಅಗನಾನೂಱು', 'ಪುಱನಾನೂಱು' ಎಂಬೆರಡು ಸಂಕಲನಗಳು ಬಹಳ ಪ್ರಸಿದ್ಧವಾಗಿವೆ. ಪುಱನಾನೂಱಿನಿಂದ ನಮಗೆ ಪ್ರಾಚೀನ ತಮಿಳು ನಾಡಿನ ಅರಸರಾದ ಚೇರ ಚೋಳ ಪಾಂಡ್ಯ ರಾಜರ, ಅವರ ಮಂತ್ರಿ ಸೇನಾಪತಿಗಳ ಮತ್ತು ಕಡೆಯ ಸಂಘಕಾಲದ ಕವಿಗಳ ವಿಚಾರ ತಿಳಿದು ಬರುತ್ತದೆ.

ಶೃಂಗಾರರಸ ಪ್ರಧಾನವಾದ ಗ್ರಂಥಗಳು (ಅಗಪ್ಪೊರುಳ್ ನೂಲ್) ಸಾಮಾನ್ಯವಾಗಿ ಆ ಕಾಲದ ಜನತೆಯ ಆದರ್ಶ ಪ್ರೇಮವನ್ನು ವಿವರಿಸುತ್ತವೆ. ಈ ಪ್ರೇಮ ಐದು ಬಗೆಯಾಗಿ ಚಿತ್ರಿತವಾಗಿದೆ: ಸಂಭೋಗ ಶೃಂಗಾರ (ಪುಣರ್ದಲ್)ವೇ ಮೊದಲನೆಯದು. ಇದಕ್ಕೂ ಬೆಟ್ಟ ಗುಡ್ಡಗಳ ಪ್ರದೇಶ (ಕುಱಿಞ್ಜಿ)ಕ್ಕೂ ಸಂಬಂಧ ಕಲ್ಪಿಸುವುದೊಂದು ಕವಿ ಸಮಯ. ಎರಡನೆಯ ಬಗೆಯೇ ವಿಪ್ರಲಂಭ ಶೃಂಗಾರ (ಪಿರಿದಲ್) ಅಥವಾ ಅಗಲಿಕೆ. ಇದಕ್ಕೂ ಮರುಭೂಮಿ (ಪಾಲೈ)ಗೂ ಸಂಬಂಧ ಕಲ್ಪಿಸುವುದು ವಾಡಿಕೆ. ಅಗಲಿಕೆಯ ನೋವನ್ನು ತಾಳಿಕೊಂಡು ಕೊರಗುವುದು (ಇರುತ್ತಲ್) ಮೂರನೆಯ ಹಂತ. ಇದರ ಅನುಭವ ಅರಣ್ಯ (ಮುಲ್ಲೈ) ಪ್ರದೇಶದಲ್ಲಿ. ನಾಯಿಕೆಯ ಹೆತ್ತ ತಾಯಿ ಅಥವಾ ಸಾಕುತಾಯಿ ಮಗಳ ಅಗಲಿಕೆಗಾಗಿ ತನ್ನ ಅಳಲನ್ನು ಸಮುದ್ರತೀರದಲ್ಲಿ (ನೆಯ್ದಲ್) ತೋಡಿಕೊಳ್ಳುವುದು. ಇದಕ್ಕೆ 'ಇರಙ್ಗಲ್' ಎಂದು ಹೆಸರು. ಇದು ನಾಲ್ಕನೆಯ ಸ್ಥಿತಿ. ಐದನೆಯದಾಗಿ 'ಊಡಲ್' ಅಥವಾ ಪ್ರಣಯಕಲಹ; ಇದು ಹೊಲಗದ್ದೆಗಳು ವಿಶೇಷವಾಗಿರುವ ಪ್ರದೇಶದಲ್ಲಿ (ಮರುದಮ್) ಅನುಭವಿಸುವುದು.

**"ಪದಿಱ್ಱುಪ್ಪತ್ತು"** ಎಂಬ ಗ್ರಂಥ ಚೇರವಂಶದ ಅರಸರ ಚರಿತ್ರೆಯನ್ನು ಚಿತ್ರಿಸುತ್ತದೆ. ಇದರಲ್ಲಿ ಒಟ್ಟು ಹತ್ತು ಭಾಗಗಳಿವೆ. ಪ್ರತಿ ಭಾಗಕ್ಕೂ ಹತ್ತು ಪದ್ಯಗಳಿವೆ. ಅಂದರೆ ಈ ಕಾವ್ಯದಲ್ಲಿ ಒಟ್ಟು ೧೦೦ ಪದ್ಯಗಳು ಅಡಗಿವೆ. ಆದರೆ ಮೊದಲನೆಯ ಹತ್ತು ಪದ್ಯಗಳೂ, ಕಡೆಯ ಹತ್ತು ಪದ್ಯಗಳೂ ಉಪಲಬ್ಧವಾಗಿಲ್ಲ. ಆದ್ದರಿಂದ ಎಂಬತ್ತು ಪದ್ಯಗಳುಳ್ಳ ಅಸಮಗ್ರ ಗ್ರಂಥ ನಮಗೆ ಸಿಕ್ಕಿದೆ.

**ಪರಿಪಾಡಲ್.**—ಇದು ಎಪ್ಪತ್ತು ಪಾದಗಳ ಪದ್ಯಗಳುಳ್ಳ ಕಾವ್ಯ. ಆದರೆ ಈಗ ಸಿಕ್ಕಿರುವುದು ೧೩ ಕವಿಗಳು ರಚಿಸಿರುವ ೨೪ ಪದ್ಯಗಳು ಮಾತ್ರ. ಇವುಗಳಲ್ಲಿ ಮುರುಗ, ವಿಷ್ಣು, ವೈಗೈ ನದಿ, ಮಧುರೆ, ಸಮುದ್ರ ವರ್ಣನೆಗಳಿವೆ. ಈ ಕಾವ್ಯ ಅಗತ್ತಿಣೈ (=ಶೃಂಗಾರ) ಭಾಗಕ್ಕೆ ಸೇರಿದ್ದು.

**ಪತ್ತುಪ್ಪಾಟ್ಟು.**—ದಶಗೀತೆ. ಹತ್ತು ಬೇರೆ ಬೇರೆ ಪದ್ಯಗಳ ಸಂಕಲನ. ಒಂದೊಂದು ಪದ್ಯವೂ ದೀರ್ಘವಾದ ಗೀತೆ. ಇನ್ನೂರರಿಂದ

ಮುನ್ನೂರೈವತ್ತು ಪಾದಗಳವರೆಗೆ ಓಡುತ್ತದೆ. ವಸ್ತು 'ಅಗ'ವನ್ನು ಕುರಿತದ್ದು. ಮುಲ್ಲೈ, ಕುಱಿಞ್ಜಿ, ನೆಡುನಲ್ವಾಡೈ, ಪಟ್ಟಿನಪ್ಪಾಲೈ ಸಂಕೇತಗಳನ್ನು ಒಳಗೊಂಡಿರುತ್ತದೆ. ಮಿಕ್ಕ ಆರು ಪುಱನೂಲ್. ಅವುಗಳಲ್ಲಿ ಐದು ಆಱ್ಱುಪ್ಪಡೈ ಮಾರ್ಗಕ್ಕೆ ಸೇರಿದುವು: ತಿರುಮುರುಗಾಱ್ಱುಪ್ಪಡೈ, ಪೊರುನರಾಱ್ಱುಪ್ಪಡೈ, ಶಿರುಪಾಣಾಱ್ಱುಪ್ಪಡೈ, ಪೆರುಮ್ ಬಾಣಾಱ್ಱುಪ್ಪಡೈ, ಕೂತ್ತರಾಱ್ಱುಪ್ಪಡೈ (ಮಲೈಪಡುಕಡಾಮ್). ಆಱ್ಱುಪ್ಪಡೈ ಎಂದರೆ ದಾರಿ ತೋರಿಸುವುದು ಎಂದರ್ಥ; ದರಿದ್ರರಾದ ವಿದ್ವಾಂಸರನ್ನೂ, ದಾಸ (ಪಾಣ)ರನ್ನೂ ದಾನಿಗಳ ಸಮೀಪಕ್ಕೆ ದಾರಿತೋರಿಸಿ ಕಳಿಸುವುದು. 'ತಿರುಮುರುಗಾಱ್ಱುಪ್ಪಡೈ' ಮಾತ್ರ ಭಕ್ತನಿಗೆ ಭಗವಂತನನ್ನು ಕಾಣುವ ಉಪಾಯವನ್ನು ಹೇಳುತ್ತದೆ. ಇದರಲ್ಲಿ ವಿಶೇಷವಾದ ಸ್ವಾಭಾವಿಕ ಸೌಂದರ್ಯವುಂಟು. ನಕೀರರು ಇದನ್ನು ರಚಿಸಿದರು. ಈ ಆಱ್ಱುಪ್ಪಡೈಯ ವಸ್ತು ಸಾಮಾನ್ಯವಾಗಿ ವಿಧ್ವಾಂಸರು ದಾನಿಗಳಾದ ಅರಸರನ್ನು ಹೊಗಳಿ ಹಣ ಸಂಪಾದಿಸುವುದು; ದಾನಿಯ ಹಿರಿಮೆಯನ್ನು ಅರಿಯದವರಿಗೆ ತಿಳಿಸುವುದು. ಇದರಲ್ಲಿ ಕವಿಗಳ ಸ್ವದೇಶ ವರ್ಣನೆ, ರಾಜರ ಹಿರಿಮೆ, ಸ್ವವಿಷಯ ಉಕ್ತವಾಗಿರುತ್ತವೆ. 'ಮದುರೈಕ್ಕಾಞ್ಜಿ' ಎಂಬುದು ದಶಗೀತೆಗಳಲ್ಲಿ ಒಂದು. ಮಧುರೆಯ ಹಿರಿಮೆಯನ್ನು ಹೇಳುವ ಈ ಬಗೆಯ ಪ್ರಾಚೀನ ತಮಿಳು ಗ್ರಂಥ. ಇದೂ 'ಪುಱನೂಲ್' ಗುಂಪಿಗೆ ಸೇರಿದ್ದು.

**ಪದಿನೆಣ್ ಕೀೞ್ಕ್ಕಣಕ್ಕು.**—ಅಷ್ಟಾದಶ ಉಪಕಾವ್ಯಗಳು. ಇವುಗಳಲ್ಲಿ (i) **ನಾಲಡಿಯಾರ್** (ಚೌಪದಿ) ಮೊದಲನೆಯದು. ಒಂದು ಬಾರಿ ತಮಿಳು ನಾಡಿನಲ್ಲಿ ಘೋರಕ್ಷಾಮ ತಲೆದೋರಿದಾಗ ಎಂಟು ಸಾವಿರ ಜಿನಮುನಿಗಳು ಪಾಂಡ್ಯರಾಜನ ಆಸ್ಥಾನಕ್ಕೆ ಹೋಗಿ ಅವನ ರಕ್ಷಣೆಯಲ್ಲಿದ್ದರು. ಕೆಲವು ಕಾಲಾನಂತರ ತಮ್ಮ ನಾಡಿನಲ್ಲಿ ಸುಭಿಕ್ಷವುಂಟಾಗಲು, ಅವರಿಗೆ ತಮ್ಮ ತಮ್ಮ ಊರುಕೇರಿಗಳ ಗೀಳು ಹತ್ತಿತು. ಆದರೆ ಪಾಂಡ್ಯನಿಗೆ ಅವರನ್ನು ಕಳಿಸಿಕೊಡಲು ಇಷ್ಟವಾಗಲಿಲ್ಲ. ಅದಕ್ಕಾಗಿ ಅವರೆಲ್ಲರೂ ಒಟ್ಟುಗೂಡಿ ಮಾತಾಡಿಕೊಂಡು ಒಂದು ದಿನ ರಾತ್ರಿ ಪಾಂಡ್ಯನಾಡನ್ನು ಬಿಟ್ಟು ಹೊರಟುಹೋದರು. ಹೋಗುವಾಗ ತಾವು ತಂಗಿದ್ದ ಬಿಡದಿಗಳಲ್ಲಿ

ಒಂದೊಂದು ಬಿಡಿ ಪದ್ಯ ಬರೆದ ಓಲೆಯನ್ನು ಬಿಟ್ಟುಹೋಗಿದ್ದರು. ಅರಸನಿಗೆ ಆಮೇಲೆ ಅವು ಸಿಕ್ಕಲು, ಅವುಗಳ ಬೆಲೆಯನ್ನು ಗೊತ್ತು ಮಾಡುವುದಕ್ಕಾಗಿ ವೈಗೈನದಿಗೆ ಹಾಕಿಸಿದನು. ಕೊಚ್ಚಿಹೋಗದೆ ಪ್ರವಾಹಕ್ಕೆ ಇದಿರಾಗಿ ತೇಲಿಕೊಂಡು ಬಂದ ಓಲೆಗಳನ್ನು ಸಂಗ್ರಹಿಸಿ ಒಂದು ಸಂಕಲನ ಗ್ರಂಥವಾಗಿ ಮಾಡಲಾಯಿತು. ಪದ್ಮನಾರ್ ಎಂಬುವರು ತಿರುಕ್ಕುಱಳಿನ ಮಾದರಿಯನ್ನನುಸರಿಸಿ ಈ ನಾನೂರು ಪದ್ಯಗಳನ್ನೂ ೪೦ ಅಧಿಕಾರಗಳಾಗಿ ವಿಂಗಡಿಸಿದರು. ೧೩ ಅಧಿಕಾರಗಳು ಧರ್ಮವನ್ನು ಬೋಧಿಸುತ್ತವೆ; ೨೬ ಅರ್ಥ (ಪೊರುಳ್) ವನ್ನು ವಿವರಿಸುತ್ತವೆ. ೧ ಕಾಮದ ವಿವರಣೆ. ಇದಕ್ಕೆ ಪದ್ಮನಾರೇ ವಿಪುಲವಾದ ವ್ಯಾಖ್ಯಾನ ಬರೆದಿದ್ದಾರೆ.

(ii) **ನಾನ್ಮಣಿಕ್ಕಡಿಗೈ.**—೧೦೧ ವೆಣ್ಬಾ ಪದ್ಯಗಳಿವೆ. ಇದರ ಕವಿ ವಿಳಂಬಿ **ನಾಗನಾರ್**. ವೈಷ್ಣವ. ಪ್ರತಿಪದ್ಯದಲ್ಲಿಯೂ ನಾಲ್ಕು ಅಮೌಲ್ಯವಾದ ನೀತಿಗಳು ಅಡಗಿವೆ. ಆದ್ದರಿಂದ ಇದಕ್ಕೆ 'ನಾಲ್ಕು ರತ್ನಗಳಡಗಿದ ಆಭರಣ'ವೆಂದು ಹೆಸರಾಗಿದೆ.

(iii) **ಕಾರ್ ನಾಱ್ಪದು.**—ಮದುರೈಕ್ಕಣ್ಣನ್ ಕೂತ್ತನಾರ್ ರಚಿಸಿದರು. ೪೦ ವೆಣ್ಬಾ ಪದ್ಯಗಳಿವೆ. ಕಾರ್ಗಾಲವನ್ನು ವರ್ಣಿಸುತ್ತವೆ.

(iv) **ಕಳವೞಿ ನಾಱ್ಪದು.**—ಕವಿ ಪೊಯ್‌ಗೈಯಾರ್. ಇವರೇ ಪೊಯ್‌ಗೈಯಾೞ್ವಾರೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಈ ಗ್ರಂಥದಲ್ಲಿ ೪೦ ವೆಣ್ಬಾ ಪದ್ಯಗಳಿವೆ. ಕೞುಮಲದಲ್ಲಿ ಚೋಳ ರಾಜನಾಗಿದ್ದ ಕೋಚ್ಚೆಂಗಣ್ಣಾನ್ ಎಂಬುವನು ಕಣೈಕಾಲಿರುಂಪೊಱೈ ಎಂಬ ಚೇರರಾಜನನ್ನು ಸೋಲಿಸಿ ಕೈಸೆರೆ ಹಿಡಿಯಲು, ಅವನನ್ನು ಸೆರೆಯಿಂದ ಬಿಡಿಸಲು ಪೊಯ್‌ಗೈಯಾರು ಈ ಪದ್ಯಮಾಲೆಯನ್ನು ರಚಿಸಿ ಕೋಚ್ಚೆಂಗಣ್ಣನಿಗೆ ಅರ್ಪಿಸಿದರು. ದೊರೆ ಇದಕ್ಕೆ ಮೆಚ್ಚಿ ಚೇರನ ಬಿಡುಗಡೆಗೆ ಅಪ್ಪಣೆಯಿತ್ತನು. ಆದರೆ ಇದು ತಲಪುವುದರೊಳಗಾಗಿ ಚೇರರಾಜನು ಬಾಯಾರಿಕೆಯಿಂದ ಸೆರೆಮನೆಯಲ್ಲಿ ಸತ್ತುಹೋಗಿದ್ದನು.

(v) **ಇನಿಯದು ನಾಱ್ಪದು.**—(ಇನಿಯ ನಲವತ್ತು) ರಚಿಸಿದವರು ಮದುರೈ ಪೂದನ್ ಶೇನ್ದನಾರ್. ಇದರಲ್ಲಿ ೪೦ ವೆಣ್ಬಾ ಪದ್ಯ

ಗಳಿವೆ. ಪ್ರತಿಯೊಂದರಲ್ಲೂ ಸ್ವಾರಸ್ಯವಾದ ನಾಲ್ಕು ಲೋಕ ನೀತಿ ವಾಕ್ಯಗಳಿರುತ್ತವೆ.

(vi) **ಇನ್ನಾನಾಱ್ಪದು.**—ಕಪಿಲರು ರಚಿಸಿದ್ದು. ೪೦ ವೆಣ್ಬಾ ಪದ್ಯಮಾಲೆ. ಮಾನವನಿಗೆ ಯಾವುದು ಹಿತ, ಯಾವುದು ಅಹಿತ ಎಂಬ ವಿಚಾರ ಉಕ್ತವಾಗಿದೆ.

(vii) **ಐನ್ದಿಣೈ.**— ಈ ಸಾಹಿತ್ಯ ರೂಪದಲ್ಲಿ ಐನ್ದಿಣೈ ಐವ್ಪದು (೫೦), ತಿಣೈಮಾಲೈ ನೂಱೈಮ್ಪದು (೧೫೦), ಐನ್ದಿಣೈ ಎೞುಪದು (೭೦). ತಿಣೈಮೊೞಿ ಐವ್ಪದು (೫೦) ಎಂಬ ಉಪಕಾವ್ಯ ಮಾಲೆಗಳಿವೆ. ಇವು ಅಗಪ್ಪೊರುಳನ್ನು ವಿವರಿಸುತ್ತವೆ.

(viii) **ತಿರುಕ್ಕುಱಳ್.**—ಇದಕ್ಕೆ 'ಮುಪ್ಪಾಲ್' ಎಂದು ಹೆಸರುಂಟು. ಬರೆದವರು ತಿರುವಳ್ಳುವರು. ಅಱಮ್, ಪೊರುಳ್, ಇನ್ಬಮ್ ಎಂಬ ಮೂರು ಭಾಗಗಳನ್ನುಳ್ಳ ೧೩೩೦ ಕುಱಳ್ ಪದ್ಯಗಳು ಈ ಗ್ರಂಥ ದಲ್ಲಿವೆ. ಇದೊಂದು ಸಾಮಾನ್ಯ ನೀತಿ ಗ್ರಂಥ. ಕಾವ್ಯ ಸೌಂದರ್ಯ ತುಂಬಿ ತುಳುಕುತ್ತಿದೆ. ಇದಕ್ಕೆ ಹತ್ತು ವ್ಯಾಖ್ಯಾನಗಳಿದ್ದರೂ ಪರಿಮೇಲ ೞಗರದೇ ಬಹು ಪ್ರಸಿದ್ಧವಾದ ಸಮಗ್ರ ವ್ಯಾಖ್ಯಾನ. ತಿರುಕ್ಕುಱಳ್ ಸಾಮಾನ್ಯವಾಗಿ ಎಲ್ಲ ನಾಗರಿಕ ಭಾಷೆಗಳಲ್ಲಿಯೂ ಅನುವಾದವಾಗಿದೆ. ಇಂಗ್ಲಿಷ್, ಫ್ರೆಂಚ್, ಜರ್ಮನ್, ಲ್ಯಾಟಿನ್ ಮುಂತಾದ ಭಾಷೆಗಳಲ್ಲಿ ಈ ಗ್ರಂಥದ ಅನುವಾದಗಳಿವೆ.

(ix) **ತಿರಿಕಡುಗಮ್.**—(ತ್ರಿಕಟುಕ). ಶುಂಠಿ, ಮೆಣಸು, ಹಿಪ್ಪಲಿ ಗಳು ವ್ಯಾಧಿಯನ್ನು ಹೋಗಲಾಡಿಸುವಂತೆ, ಈ ತಿರಿಕಡುಗವು ಮಾನವನ ಆಧಿಗೆ ಪರಮೌಷಧವೆನ್ನುತ್ತಾರೆ. ಬರೆದವರು ನಲ್ಲಾದನಾರ್.

(x) **ಆಚಾರಕ್ಕೋವೈ.**— ಪೆರುವಾಯಿನ್ ಮುಳ್ಳಿಯರು ಬರೆದದ್ದು. ನೂರು ಪದ್ಯಗಳಲ್ಲಿ ಲೋಕನೀತಿಯನ್ನು ಬೋಧಿಸುತ್ತದೆ. ಆಹಾರ ನಿಯಮ ಮೊದಲಾದ ಹಲವು ನೀತಿಗಳನ್ನು ಉಪದೇಶಿಸುತ್ತದೆ.

(xi) **ಪೞಮೊೞಿ ನಾನೂಱು.**—ಮುನ್‌ತುಱೈ ಅಱೈಯರ್ ಎಂಬ ಜೈನ ಕವಿ ಬರೆದದ್ದು. ೪೦೦ ವೆಣ್ಬಾಗಳಿವೆ. ಇದೊಂದು ನೀತಿ

ಗ್ರಂಥ. ಪ್ರತಿ ಪದ್ಯದಲ್ಲಿಯೂ ಒಂದೊಂದು ಗಾದೆ ಅಡಗಿದೆ. "ನಾಯಿ ಕಂಡಾಗ ಕಲ್ಲೇ ಸಿಕ್ಕದು"; "ತುಂಬಿದ ಕೊಡ ತುಳುಕುವುದಿಲ್ಲ"; "ಕೋತಿಯ ಕೈಗೆ ಕೊಳ್ಳಿ ಸಿಕ್ಕಿದಂತೆ"; "ಸಾವಿರ ಕಾಗೆಯಾದರೂ ಒಂದೇ ಕಲ್ಲು ಸಾಕು" ಎಂದು ಮೊದಲಾದ ನಾಣ್ನುಡಿಗಳು ತುಂಬಿವೆ.

(xii) **ಶಿಱು ಪಞ್ಚಮೂಲಮ್.**— ಸಂಘಕಾಲದ ಮಾಮೂಲ ನಾರ್ ರಚಿಸಿದ್ದು. ಪ್ರತಿಪದ್ಯದಲ್ಲಿಯೂ ಐದೈದು ಬುದ್ಧಿವಾದಗಳಿವೆ. ಶೈಲಿ ಬಹಳ ಸೊಗಸು. ಸಾಮಾನ್ಯ ನೀತಿಗಳು ಉಕ್ತವಾಗಿವೆ.

(xiii) **ಮುದುಮೊೞಿಕ್ಕಾಞ್ಜಿ.**—ಪುರಿಶೈಕ್ಕಿಟಿವನಾರ್ ಬರೆದದ್ದು. ಹತ್ತು ಭಾಗಗಳಿವೆ. ನೀತಿಗ್ರಂಥ. ಶೈಲಿ ಸರಳ.

(xiv) **ಏಲಾದಿ.**—ಎಂಬತ್ತೊಂದು ಪದ್ಯಗಳಿವೆ. ಪ್ರತಿ ಚೌಪದಿಯಲ್ಲಿಯೂ ಐದಾರು ನೀತಿವಾಕ್ಯಗಳು ಅಡಕವಾಗಿವೆ. ಗ್ರಂಥದ ಹೆಸರು 'ಏಲಾದಿ' ಅಥವಾ 'ಏಲಕ್ಕಿ' ಎಂದಿರುವುದರಿಂದ, ಏಲಕ್ಕಿ, ಕರ್ಪೂರ, ಅಗಿಲು, ಶ್ರೀಗಂಧ, ಜೇನು ಇವೈದನ್ನೂ ಸೇರಿಸಿ ತೈಲ ಮಾಡಿದರೆ ಬಹಳ ಸುವಾಸನೆಯಾಗಿರುತ್ತದೆ; ಅದರಂತೆ ಈ ಏಲಾದಿಯಲ್ಲಿಯೂ ಐದು ಉಪಯುಕ್ತಾಂಶಗಳು ಉಕ್ತವಾಗಿವೆ. ಇದರ ಕರ್ತೃ ಜೈನ ಕವಿಯಾದ ಕಣಿಮೇದಾವಿಯಾರ್.

(xv) **ಇನ್ನಿಲೈ ಅಥವಾ ಕೈನ್ನಿಲೈ.**—ಸಂಕಲನ ಗ್ರಂಥ. ಇದನ್ನು ಪೊಯ್‌ಗೈಯಾರ್ ರಚಿಸಿದರೆಂದು ಕೆಲವರು ಹೇಳುತ್ತಾರೆ. ೪೫ ಪದ್ಯಗಳಿವೆ. ಚತುರ್ವಿಧ ಪುರುಷಾರ್ಥವೇ ಇದರ ಹುರುಳು. ಮದುರೈಪ್ಪೂದನಾರ್ ಇದನ್ನು ಸಂಕಲನಮಾಡಿದರು.

(xvi) **ಮುತ್ತೊಳ್ಳಾಯಿರಮ್.**— ಪ್ರಾಚೀನ ತಮಿಳು ಗ್ರಂಥಗಳಲ್ಲಿ ಇದು ಶ್ರೇಷ್ಠವಾದ ವೆಣ್ಬಾ ಸಂಕಲನ. ಚೇರ ಚೋಳ ಪಾಂಡ್ಯ ರಾಜರ ಕೀರ್ತಿಯನ್ನು ಕುರಿತು ಪ್ರತಿ ಪೀಳಿಗೆಗೂ ಒಂಬೈನೂರು ಪದ್ಯಗಳ ಪ್ರಕಾರ ೨,೭೦೦ ಪದ್ಯಗಳುಳ್ಳ ಕಾವ್ಯ. ಆದರೆ ಎಲ್ಲಿಯೋ ಕೆಲವು ಪದ್ಯಗಳು ಮಾತ್ರ ಸಿಕ್ಕಿವೆ.

ತಮಿಳು ಸಂಘ ಕಾಲದಲ್ಲಿ ಹಲವರು ಕವಿಗಳೂ, ಕವಯಿತ್ರಿಯರೂ ಇದ್ದರು. ಇವರಿಗೆ ಸಾಮಾನ್ಯವಾಗಿ ಚೇರ ಚೋಳ ಪಾಂಡ್ಯರಾಜರು ಪೋಷಕರಾಗಿರುತ್ತಿದ್ದರು. ಈ ಅರಸರಲ್ಲಿಯೂ ಅನೇಕರು ಸ್ವಯಂ ಕವಿಗಳಾಗಿ ಆಶ್ರಯದಾತರಾಗಿ ಮೆರೆದಿರುವುದು ತಮಿಳು ಸಾಹಿತ್ಯ ಚರಿತ್ರೆಯಲ್ಲಿ ಬೆಳಗುತ್ತಿದೆ.

## ಬೌದ್ಧ ಶ್ರಮಣರ ಕಾಲ (ಕ್ರಿ. ಶ. ೧೦೧—೬೦೦)

ಉತ್ತರದೇಶದಿಂದ ಬೌದ್ಧರೂ, ಶ್ರಮಣರೂ ತೆಂಕಣ ಕಂಚಿ, ಮಧುರೆ, ಆನೆಮಲೆ ಮುಂತಾದ ಸ್ಥಳಗಳಲ್ಲಿ ಬಂದು ತಂಗಿದರು. ಕಾಲ ಕ್ರಮದಲ್ಲಿ ಮಠಗಳನ್ನೂ ಕಟ್ಟಿಕೊಂಡರು. ಆಗ ಪಂಚ ಮಹಾಕಾವ್ಯ ಗಳೂ (ಐಮ್ಪೆರುಙ್ ಕಾಪ್ಪಿಯಙ್ಗಳ್) ರಚನೆಯಾದುವು. ಸಂಸ್ಕೃತ ದಲ್ಲಿರುವಂತೆಯೇ ಅಷ್ಟಾದಶವರ್ಣನೆಗಳುಳ್ಳ ಧರ್ಮಾರ್ಥಕಾಮಗಳನ್ನು ವಿವರಿಸುವ ಕಾವ್ಯಗಳೇ ತಮಿಳಿನಲ್ಲಿಯೂ ಮಹಾಕಾವ್ಯಗಳೆನಿಸಿಕೊಳ್ಳು ತ್ತವೆ. ಇವೇ ಐಮ್ ಪೆರುಮ್ ಕಾಪ್ಪಿಯಙ್ಗಳು. ಸರ್ವ ಕಾವ್ಯ ಸೌಂದರ್ಯದಿಂದ ತುಂಬಿ, ಧರ್ಮಾರ್ಥ ಕಾಮ ವಿಷಯಗಳಲ್ಲಿ ಸ್ವಲ್ಪ ಸಂಗ್ರಹವಾಗಿರುವ ಕಾವ್ಯಗಳು ಕಿರುಕಾವ್ಯಗಳು. ಇವೂ ಐದಿವೆ. ಶಿಲಪ್ಪದಿಕಾರಮ್, ಮಣಿಮೇಗಲೈ, ಚಿನ್ತಾಮಣಿ, ಕುಣ್ಡಲಕೇಶಿ, ವಳಯಾಪತಿ ಇವೇ ತಮಿಳು ಸಾಹಿತ್ಯದಲ್ಲಿ ಸುಪ್ರಸಿದ್ಧವಾದ ಪಂಚ ಮಹಾಕಾವ್ಯಗಳು.

**ಶಿಲಪ್ಪದಿಕಾರಮ್.**—ಇದನ್ನು ರಚಿಸಿದವರು ಇಳಙ್ಕೋವಡಿಗಳ್ ಎಂಬ ಮಹಾ ಕವಿ. ಈಗಿನ ತಿರುವಾಂಕೂರಿನ ರಾಜವಂಶವಾದ ಚೇರ ಕುಲದ ಶೆಙ್ಗುಟ್ಟುವನ್ ದೊರೆಯ ತಮ್ಮ. ಸಿಂಹಳದ್ವೀಪದ ಅರಸನಾಗಿದ್ದ ಇಮ್ಮಡಿ ಗಜಬಾಹುವಿನ ಸಮಕಾಲೀನ. ಅಂದರೆ ಕ್ರಿ.ಶ. ೨ನೆಯ ಶತಮಾನದಲ್ಲಿದ್ದರು. ಕಾಲುಗೆಜ್ಜೆಯೇ ನೆಪವಾಗಿ ಉಳ್ಳ, (ಮುತ್ತಮಿಳು) ಕಾವ್ಯ, ಸಂಗೀತ, ರೂಪಕ ಈ ಮೂರು ರೂಪವಾದ ತ್ರಿಕಾಂಡವುಳ್ಳ ಈ ಉದ್ಗ್ರಂಥವನ್ನು ಬರೆದರು. ಒಂದೊಂದು ಕಾಂಡದಲ್ಲಿಯೂ ಮುಚ್ಚುವೈ ಅಂದರೆ ಶೃಂಗಾರ, ವೀರ, ಕರುಣರಸ ಪ್ರಧಾನವಾಗಿವೆ.

ಚೇರ ಚೋಳ ಪಾಂಡ್ಯರಾಜರ ಹಿರಿಮೆ ಒಂದೊಂದು ಕಾಂಡದಲ್ಲಿಯೂ ಕ್ರಮವಾಗಿ ವರ್ಣಿತವಾಗಿದೆ. ಇಳಙ್ಗೋವಡಿಗಳೇ ಹೇಳಿಕೊಂಡಿರುವಂತೆ:

೧. ಊೞ್ವಿನೈ ವಿಾಟ್ಟುವರ್ ವನ್ದು ಊಟ್ಟುವರ್
(ಬಿದಿಯೆಂಬುದು ವಿಾರಲಸದಳ)

೨. ಕಱ್ಪುಡೈ ಮಗಳಿರೈ ಕಡವುಳುವರ್ ಪೋಱ್ಱುವರ್
(ಬಾಗುವರು ದೇವತೆಗಳು ಪತಿವ್ರತೆಗೆ)

೩. ಅರಶಿಯಲ್ ಪಿೞೈತ್ತೋರ್ಕ್ಕು ಅಱಙ್ಗೂಱ್ಱಾಗುವರ್
(ದಂಡಿಪಳು ಧರ್ಮದೇವತೆ ರಾಜಧರ್ಮವನುಳಿದವನಂ)

ಎಂಬ ಮೂರು ದೊಡ್ಡ ನೀತಿಗಳನ್ನು ಉಪದೇಶಿಸುವುದೇ ಈ ಗ್ರಂಥದ ಮುಖ್ಯ ಆಶಯ. ಈ ಗ್ರಂಥಕರ್ತೃವನ್ನು ಕೆಲವರು ಜೈನನೆನ್ನುತ್ತಾರೆ. ಮತ್ತೆ ಕೆಲವರು ಶೈವನೆನ್ನುತ್ತಾರೆ. ಆದರೆ ಜೈನನಾಗಿದ್ದಿರಬಹುದು ಎಂಬುದಕ್ಕೆ ಶಿಲಪ್ಪದಿಕಾರ ಕಾವ್ಯದಲ್ಲಿ ಮೊದಲಿಂದ ಕೊನೆಯುವರೆಗೂ ಹಲವಾರು ಆಧಾರಗಳು, ಜಿನಸಮುಯದ ಕುರುಹುಗಳು ಕಾಣಿಸುವುದರಿಂದ ನಿರ್ಧರಿಸಬಹುದಾಗಿದೆ.

**ಮಣಿಮೇಗಲೈ.**—ಶೀತ್ತಲೈಚ್ಚಾತ್ತನಾರ್ ರಚಿಸಿದ್ದು. ಇವರು ತಿರುವಳ್ಳುವರ ಸಮಕಾಲೀನರು. ತಿರುಕ್ಕುಱಳೆಂದರೆ ಇವರಿಗೆ ಬಹಳ ಅಭಿಮಾನ. ಕಾವ್ಯದೋಷ ರಹಿತವಾದ ಉದ್ಗ್ರಂಥವೆಂದು ಮೆಚ್ಚಿದ್ದಾರೆ. ಶೀತಲೈಚ್ಚಾತ್ತನಾರಿಗೆ ಈ ಹೆಸರು ಬರಲು ಕಾರಣ ಬಹು ಸ್ವಾರಸ್ಯವಾಗಿದೆ. ಶೀತ್ತಲೈ ಕೀವು ಸುರಿಯುವ ತಲೈಯುಳ್ಳ ಶಾತ್ತನಾರ್ ಎಂದರ್ಥ. ಇವರು ಮಹಾ ಪಂಡಿತ ಕವಿ. ಯಾವ ಗ್ರಂಥ ಇವರ ಕೈಗೆ ಬಂದರೂ ಮೆಚ್ಚುತ್ತಿರಲಿಲ್ಲ. ದೋಷೈಕದೃಷ್ಟಿಯಾಗಿ ತಪ್ಪುಗಳನ್ನು ಎತ್ತಿ ತೋರಿಸುವುದೇ ಇವರ ಕೆಲಸವಾಗಿತ್ತು. ಕಾವ್ಯ ದೋಷ ಕಂಡಾಗ ಬರೆಯುವ ಉಕ್ಕಿನ ಕಂಟದಿಂದ ತಮ್ಮ ತಲೆಯನ್ನು ಚುಚ್ಚಿಕೊಳ್ಳುತ್ತಿದ್ದರಂತೆ. ಇದರಿಂದ ಅವರ ತಲೆಯಲ್ಲಿ ವ್ರಣವಾಗಿ ಕೀವು ಸುರಿಯುತ್ತಿತ್ತಂತೆ. ತಿರುವಳ್ಳುವರ ಧರ್ಮಾರ್ಥ ಕಾಮಗಳನ್ನು ವಿವರಿಸುವ (ಮುಪ್ಪಾಲ್) ತಿರುಕ್ಕುಱಳನ್ನು ಕಂಡೊಡನೆ ಇವರ ಶಿರೋವೇದನೆ ಮಾಯವಾಯಿತಂತೆ.

"ಶೀನ್ದಿ ನೀರ್ ಕಣ್ಡಮ್ ತೆಱುಶುಕ್ಕುತ್ತೇನಳಾಯ್
ಮೋನ್ದ ಪಿನ್ ಯಾರ್ಕುಮ್ ತಲೈಕ್ಕುತ್ತಿಲ್—ಕಾನ್ದಿ
ಮಲೈಕ್ಕುತ್ತ ಮಾಲ್ಯಾನೈ ವಳ್ಳುವರ್ ಮುಪ್ಪಾಲಾಲ್
ತಲೈಕ್ಕುತ್ತುತ್ತೀರ್ವುರ್ ಶಾತ್ತರ್ಕು"

[ಶೀಂದಿ ನೀರು ಸಕ್ಕರೆ ಶುಂಠಿ ಜೇನು—ಮೂರನ್ನೂ ಕಲಸಿ ಮೂಸಿದರೆ ತಲೆನೋವು ಮಾಯವಾಗುತ್ತದೆ; ಹಾಗೆಯೇ ವಳ್ಳುವರ ಮುಪ್ಪಾಲಾದ ತಿರುಕ್ಕುಱಳಿನಿಂದ ಶೀತ್ತಲೈಚ್ಚಾತ್ತನಾರಿಗೆ ಶಿರೋವೇದನೆ ಕೊನೆಗಂಡಿತು] ಎಂದು ಮರುತ್ತುವನ್ ದಾಮೋದರನಾರ್ ಎಂಬುವರು ವಿಮರ್ಶಾತ್ಮಕವಾದ ವೆಣ್ಬಾ ಪದ್ಯವನ್ನು ಹಾಡಿದ್ದಾರೆ.

ಈ ಕವಿ ಬೌದ್ಧರೆಂದು ಕಾಣುತ್ತದೆ. ಮಣಿಮೇಖಲೆ ಈ ಕಾವ್ಯಕ್ಕೆ ನಾಯಿಕೆ. ಕೋವಲನ್ ಮತ್ತು ಮಾಧವಿಯ ಮಗಳು. ಅವಳು ಆಚರಿಸಿದ ಸಂನ್ಯಾಸವನ್ನು ಈ ಕಾವ್ಯ ವಿವರಿಸುತ್ತದೆ. ಆದ್ದರಿಂದ ಇದಕ್ಕೆ ಮಣಿಮೇಖಲೆಯ ವೈರಾಗ್ಯವೆಂದೂ ಹೆಸರಿದೆ. ಇದರಲ್ಲಿ ಮೂವತ್ತು ಪ್ರಕರಣಗಳಿವೆ. ಬಹಳ ಉದ್ದಾಮ ಕಾವ್ಯ. ಬೌದ್ಧಧರ್ಮವನ್ನು ವಿವರಿಸುತ್ತದೆ.

**ಜೀವಕ ಚಿನ್ತಾಮಣಿ.**—ಗ್ರಂಥಕರ್ತರು ತಿರುತ್ತಕ್ಕ ದೇವರ್. ಜೈನ ಸಂನ್ಯಾಸಿ. ಜೈನ ಕವಿಗಳೆಲ್ಲರೂ ವೈರಾಗ್ಯವನ್ನು ವರ್ಣಿಸಿ ಕಾವ್ಯ ಬರೆಯಬಲ್ಲರೇ ಹೊರತು ಪ್ರಾಪಂಚಿಕ ಜೀವನವನ್ನು ಚಿತ್ರಿಸಲು ಅವರಿಗೆ ಬರದೆಂದು ಜನ ಹೇಳಿಕೊಳ್ಳುತ್ತಿದ್ದ ಮಾತನ್ನು ಸುಳ್ಳಾಗಿಸಲು ಈ ಕವಿ ಜೀವಕ ಚಿಂತಾಮಣಿಯೆಂಬ ಲೌಕಿಕ ಗ್ರಂಥ ಬರೆದು, ಇದರಲ್ಲಿ ಹುರುಡಿನಿಂದ ಎಂಟು ಮದುವೆಗಳನ್ನು ವರ್ಣಿಸಿಬಿಟ್ಟಿದ್ದಾರೆ. ಹದಿಮೂರು ಅಧ್ಯಾಯಗಳಿವೆ. ಇದಕ್ಕೆ "ಮಣನೂಲ್" ಅಥವಾ ಮದುವೆಯ ಕಾವ್ಯ ಎಂಬ ಅನ್ವರ್ಥನಾಮವೂ ಉಂಟು. ಸಂಸ್ಕೃತ ವೃತ್ತಗಳನ್ನು ಬಳಸಿಕೊಂಡಿರುವ ತಮಿಳು ಕಾವ್ಯವೆಂದರೆ ಇದೇ ಮೊದಲನೆಯದು. ಇದಕ್ಕೆ ಮುಂಚಿನ ಕಾವ್ಯಗಳೆಲ್ಲವೂ ತಮಿಳು ಛಂದಸ್ಸಿನಲ್ಲಿಯೇ ಇವೆ. ಕವಿಚಕ್ರವರ್ತಿ ಕಂಬರು ಈ ಚಿಂತಾಮಣಿಯನ್ನು ಆದರ್ಶವಾಗಿಟ್ಟುಕೊಂಡು ತಮ್ಮ ರಾಮಾಯಣದಲ್ಲಿ ಸಂಸ್ಕೃತ ವೃತ್ತಗಳನ್ನುಪಯೋಗಿಸಿ

ದ್ದಾರೆ. ಚಿಂತಾಮಣಿ ಕಾವ್ಯ ಶೃಂಗಾರ ರಸಪ್ರಧಾನವಾದದು. ಆದರೆ ಕಾವ್ಯಾಂತ್ಯದಲ್ಲಿ ಜೈನ ಪದ್ಧತಿಯಂತೆ ಕಥಾನಾಯಕನು ಮುಮುಕ್ಷುವಾಗುತ್ತಾನೆ. ಈ ಮಹಾಕಾವ್ಯ ಪೆರಿಯಪುರಾಣದ ರಚನೆಗೆ ಕಾರಣವಾಯಿತೆಂಬುದಕ್ಕೆ ಸ್ವಾರಸ್ಯವಾದ ಕಥೆಯೊಂದಿದೆ.

**ಕುಣ್ಡಲಕೇಶಿ, ವಳಯಾಪತಿ.**—ಇವೆರಡು ಮಹಾಕಾವ್ಯಗಳ ಹೆಸರು ಮಾತ್ರ ನಮಗೆ ಗೊತ್ತು. ಆದರೆ ಗ್ರಂಥಗಳು ಮಾತ್ರ ಉಪಲಬ್ಧವಾಗಿಲ್ಲ. ಇವು ಜೈನಗ್ರಂಥಗಳು.

**ಐಞ್ಚಿರು ಕಾಪ್ಪಿಯಂಗಳ್.**—ಐದು ಕಿರು ಕಾವ್ಯಗಳು:

(i) ನೀಲಕೇಶಿ (ii) ಶೂಳಾಮಣಿ (=ಚೂಡಾಮಣಿ) (iii) ಯಶೋದರ ಕಾವ್ಯಂ (iv) ಉದಯಣನ್ ಕದೈ (=ಉದಯನನ ಕಥೆ) ಅಥವಾ ಉದಯಣ ಕುಮಾರ ಕಾವ್ಯಂ (v) ನಾಗಕುಮಾರ ಕಾವ್ಯಂ.

(i) **ನೀಲಕೇಶಿ.**—ಕವಿಯ ಹೆಸರು ಗೊತ್ತಿಲ್ಲ. ನೀಲಕೇಶಿಯೇ ಕಥಾನಾಯಿಕೆ. ಈ ಕಾವ್ಯದಲ್ಲಿ ೧೦ ಸರ್ಗಗಳಿವೆ. ಹಲವು ಮತಗಳನ್ನು ವಿವರಿಸುತ್ತದೆ. ಇತ್ತೀಚೆಗೆ ಇದನ್ನು ಪ್ರಕಟಿಸಿದ್ದಾರೆ.

(ii) **ಶೂಳಾಮಣಿ.**—ತೋಲಾಮೊಟ್ಟಿತ್ತೇವರೆಂಬ ಜೈನ ಕವಿ ಬರೆದದ್ದು. ಸಮಗ್ರ ಗ್ರಂಥ ಸಿಕ್ಕಿದೆ. ಇದರಲ್ಲಿ ೨೧೩೧ ವೆಣ್ಬಾ ಪದ್ಯಗಳುಳ್ಳ ೧೨ ಸರ್ಗಗಳಿವೆ. ಇದರ ಮೂಲ ಗ್ರಂಥ ಮಹಾಪುರಾಣ.

(iii) **ಯಶೋದರ ಕಾವ್ಯಮ್.**—ಜೈನ ಕಾವ್ಯ. ಐದು ಸರ್ಗಗಳಿವೆ. ૩೨೦ ಪದ್ಯಗಳಿವೆ. ಸಂಸ್ಕೃತ ಯಶೋಧರ ಚರಿತ್ರೆಯೇ ಇದಕ್ಕೆ ಮೂಲ ಗ್ರಂಥ. ಇದರ ಕರ್ತೃ ಗೊತ್ತಿಲ್ಲ.

(iv) **ಉದಯಣ ಕುಮಾರ ಕಾವ್ಯಮ್.**—ವತ್ಸ ರಾಜನಾದ ಉದಯನನ ಚರಿತ್ರೆ ಇದರ ವಸ್ತು. ೩೬೭ ಪದ್ಯಗಳುಳ್ಳ ೬ ಪ್ರಕರಣಗಳಿವೆ.

(v) **ನಾಗಕುಮಾರ ಕಾವ್ಯಮ್.**—ಇದರ ವಿಷಯವೇನೆಂಬುದು ಗೊತ್ತಿಲ್ಲ.

**ಕೊಙ್ಗುವೇಳಿರ್ ಮಾಕ್ಕದೈ.**—ಪೆರುಙ್ಗತ್ತೈ ಎಂದೂ ಬಳಕೆಯಿದೆ. ಇದು ಕೊಂಗುವೇಳಿರ್ ಎಂಬ ಕವಿಯಿಂದ "ಅಗವಲ್" ಛಂದಸ್ಸಿನಲ್ಲಿ ರಚಿತವಾದ ಕಾವ್ಯ; ಉದಯನನ ಕಥೆಯೇ ಇದರ ವಸ್ತು. ಬಹು ಶ್ರೇಷ್ಠವಾದ ಗ್ರಂಥ. ಸಮಗ್ರ ಗ್ರಂಥ ಸಿಕ್ಕಿಲ್ಲ. ಇದು ಪಂಚ ಮಹಾ ಕಾವ್ಯಗಳ ಮತ್ತು ಕಿರು ಕಾವ್ಯಗಳ ಗುಂಪಿಗೆ ಸೇರದ ಪ್ರತ್ಯೇಕ ಗ್ರಂಥ.

## ಸಮಯಾಚಾರ್ಯರ ಕಾಲ (ಕ್ರಿ. ಶ. ೭೦೦—೯೦೦)

ಈ ಕಾಲದಲ್ಲಿ ಜೈನ ಬೌದ್ಧಮತಗಳು ತಲೆಯೆತ್ತಿಕೊಂಡು ಮೆರೆಯಲು ಶೈವ ವೈಷ್ಣವರಿಗೆ ತಮ್ಮ ಧರ್ಮವನ್ನು ಕಾಪಾಡಿಕೊಳ್ಳುವುದು ಕಷ್ಟವಾಗಿ ತೋರಿತು. ಇದಕ್ಕೆ ತಕ್ಕಹಾಗೆ ಜೈನ ಬೌದ್ಧರಿಗೆ ರಾಜಾಶ್ರಯವೂ ಕಾಲಕ್ರಮದಲ್ಲಿ ತಪ್ಪುತ್ತ ಬಂತು. ಶೈವದಲ್ಲಿಯೂ ವೈಷ್ಣವದಲ್ಲಿಯೂ ದೊಡ್ಡ ದೊಡ್ಡ ಮಹನೀಯರು ಉದಿಸಿ ತಮ್ಮ ತಮ್ಮ ಮತ ಪ್ರಚಾರ ಮಾಡತೊಡಗಿದರು.

ಶೈವ ಮತಾಚಾರ್ಯರಲ್ಲಿ ಬಹು ಪ್ರಸಿದ್ಧರೆಂದರೆ ಮಾಣಿಕ್ಯವಾಚಕರು. ಇವರು ಪಾಂಡ್ಯನಾಡಿನಲ್ಲಿ ಮಧುರೆಗೆ ಸಮೀಪದಲ್ಲಿರುವ ತಿರುವಾದವೂರು ಎಂಬ ಕ್ಷೇತ್ರದಲ್ಲಿ ಹುಟ್ಟಿದರು. ಮಧುರೆಯಲ್ಲಿ ಆಗ ಅರಿಮರ್ದನ ಪಾಂಡ್ಯನು ಆಳುತ್ತಿದ್ದನು. ಮಾಣಿಕ್ಯ ವಾಚಕರಿಗೆ ಈ ಹೆಸರು ಕೇವಲ ಅಂಕಿತನಾಮ. ಇವರಿಗೆ ತಾಯಿ ತಂದೆ ಇಟ್ಟ ಹೆಸರು ಗೊತ್ತಿಲ್ಲ. 'ಆದವೂರರ್' ಎಂಬ ಊರಿನ ಹೆಸರು ಇವರಿಗುಂಟು. ಕೇವಲ ಬಾಲ್ಯದಲ್ಲಿಯೇ ಬಹಳ ಜ್ಞಾನಿಗಳು. ಇವರ ಪಾಂಡಿತ್ಯಕ್ಕೂ, ಜ್ಞಾನಕ್ಕೂ ಮನಸೋತು ಅರಿಮರ್ದನ ಪಾಂಡ್ಯ ರಾಜ ಇವರನ್ನು ತನ್ನ ಮಂತ್ರಿಯಾಗಿಟ್ಟುಕೊಂಡನು. ರಾಜನಿಗಾಗಿ ಕುದುರೆಗಳನ್ನು ಕೊಳ್ಳಲು ಹೋದಾಗ ಪರಶಿವನನ್ನು ಕಂಡು ಅವನಿಂದ "**ಶಿವಜ್ಞಾನಬೋಧ**"ದ ರಹಸ್ಯವನ್ನರಿತು ಜ್ಞಾನಿಯಾದರು. ಮಂತ್ರಿ ಪದವಿಯನ್ನು ಮರುಕ್ಷಣದಲ್ಲಿಯೇ ತ್ಯಜಿಸಿ ಶಿವನ ಆಜ್ಞಾನುಸಾರವಾಗಿ ತಿರುಪ್ಪೆರುನ್ದುಱೈಯಲ್ಲಿ ಆವುಡೈಯಾರ್ (ಪಶುಪತಿ) ದೇಗುಲವನ್ನು ಕಟ್ಟಿದರು. ಆಮೇಲೆ ಅರಿಮರ್ದನ ಪಾಂಡ್ಯನ ಆಗ್ರಹಕ್ಕೆ ಪಾತ್ರರಾಗಿ ಹಲವಾರು ಪವಾಡ

ಗಳನ್ನು ಮೆರೆದು ರಾಜನಿಗೆ ತಿಳಿವು ಮೂಡುವಂತೆ ಮಾಡಿದರು. ಕಡೆಗೆ ಭಕ್ತಿ ಪ್ರಧಾನವಾದ **ತಿರುವಾಚಕ** ಗ್ರಂಥವನ್ನು ರಚಿಸಿ ಚಿದಂಬರದ ನಟರಾಜನ ಸನ್ನಿಧಿಯಲ್ಲಿ ಅರ್ಪಿಸಿ, ಗ್ರಂಥದ ಅರ್ಥವೇನೆಂದು ಕೇಳಿದ ಶಿಷ್ಯರಿಗೆ ನಟರಾಜನನ್ನೇ ಸುಟ್ಟಿ ತೋರಿಸಿ ಅಂತರ್ಧಾನರಾದ ಮಹಾ ಮಹಿಮರು ಶ್ರೀ ಮಾಣಿಕ್ಕವಾಚಕ ಸ್ವಾಮಿಗಳು. ಇವರ ಜೀವನಚರಿತ್ರೆ ಎಷ್ಟು ಸ್ವಾರಸ್ಯವೋ ಇವರ ತಿರುವಾಚಕವೂ ಅಷ್ಟೇ ಸ್ವಾರಸ್ಯ. ಶ್ರೇಷ್ಠ. ಇವರು 'ತಿರುಕ್ಕೋವೈಯಾರ್' ಎಂಬ ಮತ್ತೊಂದು ಗ್ರಂಥವನ್ನು ರಚಿಸಿದ್ದಾರೆ. ಅದರಲ್ಲಿ ನಾಯಕ ನಾಯಿಕೆಯರ ಭಾವ ಕಂಡು ಬರುತ್ತದೆ.

ತಮಿಳು ಸಾಹಿತ್ಯದಲ್ಲಿ ೯೬ ಕಾವ್ಯರೂಪಗಳಿವೆ. ಅವುಗಳಲ್ಲಿ "ಕೋವೈ" ಎಂಬುದು ಒಂದು ಬಗೆಯ ಕಾವ್ಯ. ಇದರಲ್ಲಿ ನಾಯಕ ನಾಯಿಕೆಯರ ಭಾವ, ಶೃಂಗಾರ ರಸ, ಪ್ರಣಯ ಕಥೆ, ಅವರ ನೋಟ ಕೂಟಗಳು ವರ್ಣಿತವಾಗಿರುತ್ತವೆ. ಮಾಣಿಕ್ಕ ವಾಚಕರ ತಿರುಕ್ಕೋವೈ ಯಾರಿಗೆ ನಟರಾಜನೇ ನಾಯಕ. ಜೀವಾತ್ಮನೇ ನಾಯಿಕೆ. ಇವರ ಪ್ರಣಯವನ್ನು ಭಕ್ತಿ ಪ್ರಧಾನವಾಗಿ ಚಿತ್ರಿಸಿದೆ. ಹೊರನೋಟಕ್ಕೆ ಕೋವೈ ಕಾವ್ಯ ಜಾತಿಯ ಶೃಂಗಾರ ಕಂಡರೂ, ಕಣ್ಣಿಟ್ಟು ನೋಡಿದರೆ ಕವಿಯ ಭಕ್ತಿಯ ಆವೇಶ ಕಾಣುತ್ತದೆ. ಕೋವೈ ಕಾವ್ಯ ಜಾತಿಯಲ್ಲಿ ತಿರುಕ್ಕೋವೈಯಾರ್ ಗ್ರಂಥವೇ ಅತಿಶ್ರೇಷ್ಠವಾದುದು. ಆದ್ದರಿಂದಲೇ ಇದಕ್ಕೆ ಆದಿಯಲ್ಲಿ "ತಿರು" ಮತ್ತು ಅಂತ್ಯದಲ್ಲಿ "ಆರ್" ಎಂಬ ಗೌರವಾರ್ಥಸೂಚಕ ಶಬ್ದಗಳು ಸೇರಿವೆ. ಮಿಕ್ಕ ಕೋವೈಗಳಿಗೆ ಈ ಗೌರವವಿಲ್ಲ.

**ತಿರುಜ್ಞಾನ ಸಮ್ಬನ್ದರ್.**— ಪಲ್ಲವ ರಾಜನಾದ ಇಮ್ಮಡಿ ಮಹೇಂದ್ರವರ್ಮನ ಕಾಲದಲ್ಲಿದ್ದರು. ತಿರುಮುಜ್ಞೈಯಾಟ್ಟಾರ ಸಮ ಕಾಲೀನರು. ಇವರ ತಂದೆ ಶಿವಪಾದ ಹೃದಯರು; ತಾಯಿ ಭಗವತಿ ಅಮ್ಮೈಯಾರು. ತಿರುಜ್ಞಾನ ಸಂಬಂಧರು ಶೀಕಾರ್ಟಿಯಲ್ಲಿ ಬ್ರಾಹ್ಮಣ ಕುಲದಲ್ಲಿ ಪರಮಾತ್ಮನ ವರಪ್ರಸಾದದಿಂದ ಹುಟ್ಟಿದ ವರಪುತ್ರರು. ಇವರಿಗೆ ಮೂರನೆಯ ಪ್ರಾಯ ತುಂಬುತ್ತ ಬಂದಾಗ ಒಂದು ದಿನ

ಶಿವಪಾದ ಹೃದಯರು ತಟಾಕಕ್ಕೆ ಹೋಗಿ ಸ್ನಾನಮಾಡಲು ನೀರಿನಲ್ಲಿ ಮುಳುಗಿದರು. ದಡದಲ್ಲಿ ನಿಂತಿದ್ದ ಮಗು ತಂದೆಯನ್ನು ಕಾಣದೆ ಅಳಲಾರಂಭಿಸಿತು. ದನಿಗರಗಿ ಅಳುತ್ತಿದ್ದ ಮಗುವಿಗೆ ಹಾಲೂಡಿಸಲು ಪಾರ್ವತಿ ಬೇಗನೆ ಬಂದು ಹೊನ್ನು ಬಟ್ಟಲಿನಲ್ಲಿ ಜ್ಞಾನಕ್ಷೀರ ಕುಡಿಸಿ ಮಾಯವಾದಳು. ತಂದೆ ಆಹ್ನಿಕ ಮುಗಿಸಿಕೊಂಡು ಬಂದು ತಮ್ಮ ಮಗುವಿನ ತುಟಿಗೆ ಹಾಲಿನ ತುಂತುರುಗಳು ಅಂಟಿಕೊಂಡಿರುವುದನ್ನು ಕಂಡು ಪ್ರಶ್ನೆಮಾಡಿದರು. ಜ್ಞಾನಕ್ಷೀರ ಕುಡಿದ ತಿರುಜ್ಞಾನ ಸಂಬಂಧರು "ತೋಡುಡೈಯ ಶೆವಿಯನ್ ವಿಡೈಯೇಱಿ" ಎಂಬ ತೇವಾರವನ್ನು ಹಾಡಿ ಪರಶಿವನನ್ನು ನಿರ್ದೇಶಿಸಿದರು. ಅಲ್ಲಿಂದ ಮುಂದೆ ಹೆಸರಿಗೆ ತಕ್ಕಂತೆ ಜ್ಞಾನನಿಧಿಯಾಗಿ ತಂದೆಯ ಕಂಕುಳಲ್ಲಿ ಕುಳಿತು ಶೈವಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಲ್ಲಿ ಶಿವನಿಗೆ ಮಂಗಳಾಶಾಸನ ಮಾಡಿದರು. ಇವರ ತೇವಾರ ಗ್ರಂಥ ಲೋಕ ಪ್ರಸಿದ್ಧವಾದುದು. ಸಾವಿರಾರು ಪದ್ಯಗಳನ್ನೊಳಗೊಂಡಿದೆ. ಶೈವ ಸಿದ್ಧಾಂತ ಸ್ಥಾಪನೆ ಮಾಡುವುದಕ್ಕಾಗಿ ಜೈನಮತ ಖಂಡನೆಮಾಡಿ ಜಯಿಸಿದರು. ಇವರ ತೇವಾರ ಇತರ ಕವಿಗಳ ತೇವಾರಕ್ಕಿಂತ ಕ್ಲಿಷ್ಟ. ಅಚ್ಚತಮಿಳು ಶೈಲಿಯಲ್ಲಿ ರಚಿತವಾಗಿದೆ. ತಮಿಳು ಪಾಂಡಿತ್ಯ ಅಪಾರವಾಗಿದ್ದುದರಿಂದ ಇವರಿಗೆ ತಮಿೞ್ ಜ್ಞಾನಸಂಬಂದರ್ ಎಂಬ ಅನ್ವರ್ಥನಾಮವೂ ವಾಡಿಕೆಯಾಗಿದೆ. ವೈಷ್ಣವರಲ್ಲಿ ನಮ್ಮಾೞ್ವಾರು ಹೇಗೋ ಹಾಗೆಯೇ ಶೈವರಲ್ಲಿ ಇವರು ಪರಮಾಚಾರ್ಯರು. ಇವರು ಉಪದೇಶಿಸಿದ ಉಪಾಸನೆಯ ರೀತಿ "ಸತ್ಪುತ್ರಮಾರ್ಗ"; ಅಂದರೆ ಪರಮಾತ್ಮನಿಗೂ ಜೀವಾತ್ಮನಿಗೂ ಇರುವ ಸಂಬಂಧ ತಂದೆ ಮಕ್ಕಳ ಸಂಬಂಧಕ್ಕೆ ಸಮಾನವೆಂದು ಹೇಳುವುದು. ಇವರು ಪರಶಿವನ ಮಗನಾದ ಕುಮಾರಸ್ವಾಮಿಯ ಅವತಾರವೆಂದು ಅರುಣಗಿರಿನಾಥರ ಅಭಿಪ್ರಾಯ.

**ತಿರುನಾವುಕ್ಕರಶರ್.**— ಇವರು ತಿರುಮುನ್ನೈಪ್ಪಾಡಿನ ತಿರುವಾಮೂರ್ ಎಂಬ ಸ್ಥಳದಲ್ಲಿ ಸುಮಾರು ೨ನೇ ಶತಮಾನದಲ್ಲಿ ಅವತರಿಸಿದರು. ಬಾಲ್ಯದಲ್ಲಿ ಇವರಿಗೆ "ಮರುಣೀಕ್ಕಿಯಾರ್" (ಮರುಳನ್ನು ನೀಗಿದವರು) ಎಂಬ ಹೆಸರಿತ್ತು. ಚಿಕ್ಕಂದಿನಲ್ಲಿಯೇ ಮಾತಾಪಿತೃವಿಯೋಗವುಂಟಾ

ಯಿತು. ಇವರ ಅಕ್ಕ ತಿಲಕವತಿ. ಬಾಲ್ಯದಲ್ಲಿ ತಿರುನಾವುಕ್ಕರಸರು ಜೈನರಾಗಿ ಆ ಮತಾನುಯಾಯಿಗಳ ಗೌರವಕ್ಕೆ ಪಾತ್ರರಾಗಿದ್ದರು. ಇದು ಶಿವಭಕ್ತೆಯಾಗಿದ್ದ ತಿಲಕವತಿಗೆ ಸಹಿಸಲಿಲ್ಲ. ಹೇಗಾದರೂ ಮಾಡಿ ತನ್ನ ತಮ್ಮನನ್ನು ಮತ್ತೆ ಶೈವನನ್ನಾಗಿ ಮಾರ್ಪಡಿಸಬೇಕೆಂದು ಪರಶಿವನನ್ನು ಪ್ರಾರ್ಥಿಸಿದಳು. ಅವಳ ಮೊರೆಯನ್ನು ಕೇಳಿ ಶಿವನು ತಿರುನಾವುಕ್ಕರಸರಿಗೆ ತಾಳಲಶಕ್ಯವಾದ ಹೊಟ್ಟೆನೋವುಂಟುಮಾಡಿ ತಿರುಪ್ಪಾದಿರಿಪ್ಪುಲಿಯೂರಿಗೆ ಬರಮಾಡಿಕೊಂಡು ಉದರಬಾಧೆಯನ್ನು ಹೋಗಲಾಡಿಸಿದನು. ಆಗ ಅರಸರಿಗೆ ಶ್ರಮಣರ ಚಿಕಿತ್ಸೆಗಳಲ್ಲಿ, ದರ್ಶನದಲ್ಲಿ ನಂಬಿಕೆ ತಪ್ಪಿತು. ಶೈವದಲ್ಲಿ ಭಕ್ತಿ ಹೆಚ್ಚಿತು. ತಿರುನಾವುಕ್ಕರಸರ ನಡತೆಯನ್ನು ಕಂಡು ಶ್ರಮಣರಿಗೆಲ್ಲ ಅತಿಕೋಪ ಬಂದಿತು. ಅವರು ಪಲ್ಲವರಾಜನಾಗಿದ್ದ ಇಮ್ಮಡಿ ಮಹೇಂದ್ರವರ್ಮನಾದ ಜೈನದೊರೆಗೆ ದೂರು ಹೇಳಿದರು. ರಾಜನ ಕಣ್ಣು ಕೆರಳಿತು. ಒಡನೆ ತಿರುನಾವುಕ್ಕರಸರನ್ನು ಎಳೆತರಲು ಭಟರನ್ನು ಅಟ್ಟಿದನು. ತಿರುನಾವುಕ್ಕರಸರು ಶಿವನನ್ನು ಮರೆಹೊಕ್ಕ ನಿರಂಕುಶರಲ್ಲವೆ?

"ನಾಮಾರ್ಕ್ಕುಮ್ ಕುಡಿಯಲ್ಲೋಮ್ ನಮನೈ ಅಞ್ಜೋಮ್ ನರಕತ್ತಿಲ್ ಇಡರ್‌ಪಡೋಮ್" ಎಂಬ ಪದ್ಯವನ್ನು ಹಾಡಿ ಶಾಂತವಾಗಿ ಕುಳಿತರು. ರಾಜಭಟರು ಬಹಳವಾಗಿ ಬೇಡಿಕೊಳ್ಳಲು ರಾಜಾಸ್ಥಾನಕ್ಕೆ ಅವರೊಡನೆ ತೆರಳಿದರು. ಕೋಪಗೊಂಡ ರಾಜನು ತಿರುನಾವುಕ್ಕರಸರನ್ನು ಬೇಯುವ ಸುಣ್ಣದ ಗೂಡಿನಲ್ಲಿ ಹಾಕಿಸಿದನು. ಭಕ್ತಶಿರೋಮಣಿಗೆ ಅದರ ಕಾವು ತಟ್ಟಲೇ ಇಲ್ಲ.

"ಮಾಶಿಲ್ ವೀಣೈಯುಮ್ ಮಾಲೈ ಮದಿಯಮುಮ್
ವೀಶು ತೆನ್ರಲುಮ್ ವೀಙ್ಗಿಳ ವೇನಿಲುಮ್
ಮಾಶು ವಣ್ಡರೈ ಪೊಯ್‌ಗೈಯುಮ್ ಪೋನ್ರದೇ
ಈಶನೆನ್ದೈ ಯಿಣೈಯಡಿ ನೀೞಲೇ"

"ಈಶನ ಪದದ್ವಯದ ನೆಳಲಿನಲ್ಲಿರುವಾಗ ವೀಣೆಯ ಇಂಚರಕ್ಕೆ ಸಂಜೆಯ ತಿಂಗಳಿಗೆ, ಬೀಸುವ ತೆಂಗಾಳಿಗೆ, ಹಬ್ಬಿದ ವಸಂತ ಸಮಯಕ್ಕೆ, ಮರಿ ದುಂಬಿಯ ಝೇಂಕಾರವುಳ್ಳ ತಾವರೆಯ ತಟಾಕಕ್ಕೆ ಸಮಾನವಾಗಿತ್ತು.

ಸುಣ್ಣದ ಗೂಡಿನಲ್ಲಿದ್ದಾಗಿನ ನನ್ನ ಅನುಭವ'' ಎಂದು ಹಾಡಿದರು. ರಾಜನಿಗೆ ಮತ್ತಷ್ಟು ಕೋಪವುಕ್ಕಿ ತಿರುನಾವುಕ್ಕರಸರನ್ನು ಕಡೆಗೆ ಕಲ್ಲು ಕಟ್ಟಿ ಸಮುದ್ರದಲ್ಲಿ ಬಿಸಾಡಿಸಿದನು. ಅಲ್ಲಿಯೂ ಅವರು ಶಿವನನ್ನು ಮರೆಯದೆ—

''ಶೊಱ್ಱುಣೈ ವೇದಿಯನ್ ಶೋದಿ ವಾನವನ್'' ಎಂದು ಮೊದಲಾಗಿ ಹತ್ತು ತೇವಾರಪದ್ಯಗಳನ್ನು ಹಾಡಿ ತಮ್ಮ ಕೊರಳಿಗೆ ಕಟ್ಟಿದ ಬಂಡೆಯನ್ನೇ ತೆಪ್ಪವಾಗಿ ಮಾಡಿಕೊಂಡು ನೀರಿನ ಹರಹಿನ ಮೇಲೆ ತೇಲಾಡಿಕೊಂಡು ಕರೆಯೇರಿದರು. ಮಹೇಂದ್ರವರ್ಮನಿಗೆ ತಿರುನಾವುಕ್ಕರಸರ ಮಹಿಮೆ ಗೊತ್ತಾಯಿತು. ಅವನು ಜೈನಮತವನ್ನು ತ್ಯಜಿಸಿ ಶೈವನಾಗಿ ತಿರುನಾಗೇಶ್ವರದಲ್ಲಿ ದೊಡ್ಡ ಶಿವಾಲಯವೊಂದನ್ನು ಕಟ್ಟಿಸಿದನು. ತಿರುನಾವುಕ್ಕರಸರು ತಿರುಜ್ಞಾನ ಸಂಬಂಧರೊಡನೆ ಮತ್ತು ಒಂಟಿಯಾಗಿ ಹಲವು ಶೈವಕ್ಷೇತ್ರಗಳಲ್ಲಿ ತೀರ್ಥಯಾತ್ರೆಮಾಡಿ ಬಗೆಬಗೆಯಾಗಿ ತೇವಾರಗಳನ್ನು ಹಾಡಿ ಕಡೆಗೆ ತಿರುಪ್ಪುಗಲೂರಿನಲ್ಲಿ ಶಿವೈಕ್ಯರಾದರು. ಇವರಿಗೆ ''ಅಪ್ಪರ್'' ''ತಾಣ್ಡಕವೇನ್ದರ್'' ''ವಾಗೀಶರ್'' ಎಂಬ ಹೆಸರುಗಳುಂಟು. ''ಅಪ್ಪರ್'' ಎಂಬ ಹೆಸರನ್ನು ತಿರುಜ್ಞಾನ ಸಂಬಂಧರು ಇಟ್ಟರು. ''ತಾಣ್ಡಕ''ವೆಂಬ ಪದ್ಯ ಜಾತಿಯನ್ನು ಹಾಡಿದ ಶೈವ ಸಮಯಾಚಾರ್ಯರಲ್ಲಿ ಇವರೊಬ್ಬರೇ. ಅದಕ್ಕಾಗಿ ಇವರಿಗೆ ''ತಾಣ್ಡಕ ರಾಜ'' ಎಂಬ ಬಿರುದು ಬಂದಿದೆ. ''ವಾಗೀಶರ್'' ಎಂಬುದು ''ತಿರುನಾವುಕ್ಕರಶರ್'' ಎಂಬುದರ ಸಂಸ್ಕೃತಾನುವಾದ.

ಕಡೆಗಾಲದಲ್ಲಿ ಸಶರೀರವಾಗಿ ಕೈಲಾಸಕ್ಕೆ ಹೋಗಬೇಕೆಂಬ ಆಸೆಯಿಂದ ನಡೆನಡೆದು, ತೆವಳಿ, ಉರುಳಿ ಮುಂದೆ ಸಾಗಿದರು. ಎಷ್ಟು ಬಳಲಿದರೂ ಕೈಲಾಸವೇ ಸಿಕ್ಕಲಿಲ್ಲ. ಮೈಕೈಯೆಲ್ಲ ನೆತ್ತರು ಬಸಿದು ವ್ರಣವಾಯಿತು. ಆದರೂ ಕೈಲಾಸದ ಹುಚ್ಚು ಬಿಡಲಿಲ್ಲ. ಕಡೆಗೆ ಒಂದು ತಟಾಕದ ದಡದಲ್ಲಿ ಬ್ರಾಹ್ಮಣ ವೇಷತಾಳಿ ಬಂದ ಶಿವನ ಮಾತಿನ ಪ್ರಕಾರ ನೀರಿನಲ್ಲಿ ಮುಳುಗಿದರು. ಒಡನೆ ಈಗಿನ ತಂಜಾವೂರಿಗೆ ಎಂಟು ಮೈಲಿ ದೂರದಲ್ಲಿರುವ, ತ್ಯಾಗರಾಜರು ವಾಸಮಾಡಿದ ಪಂಚನದ ಕ್ಷೇತ್ರವಾದ ತಿರುವೈಯಾರಿನ ತಟಾಕದಲ್ಲಿ ಮೇಲಕ್ಕೆದ್ದರು. ಇವರಿಗೆ ಅಲ್ಲಿ ಕೈಲಾಸದ

ದೃಶ್ಯ ಕಾಣಿಸಿತು. ಆಮೇಲೆ ಹಲವಾರು ವರ್ಷ ಬದುಕಿದ್ದು ಜಗತ್ತೇ ಶಿವಮಯವೆಂದು ಕಂಡುಕೊಂಡು ಸಾವಿರಾರು ತೇವಾರ ಪದ್ಯಗಳನ್ನು ಹಾಡಿದರು.

**ಸುನ್ದರಮೂರ್ತಿಸ್ವಾಮಿ.**— ಇವರನ್ನು "ಸುನ್ದರರ್" ಎಂದು ಕರೆಯುವುದು ವಾಡಿಕೆ. ಒಂಬತ್ತನೆಯ ಶತಮಾನದ ಅಂತ್ಯದಲ್ಲಿ ಬಾಳಿದರು. ಕೈಲಾಸದಲ್ಲಿ ಪರಮೇಶ್ವರನಿಗೆ ಪುಷ್ಪ ಕೈಂಕರ್ಯ ನಡಸುತ್ತಿದ್ದರು. ಆಗ ಪಾರ್ವತಿಗೆ ಪೂಜೆಗಾಗಿ ಹೂಕೊಯ್ದು ತರುತ್ತಿದ್ದ ಅನಿಂದಿತೆ, ಕಮಲಿನಿಯರನ್ನು ದಾರಿಯಲ್ಲಿ ಕಂಡು ಮೋಹಪಾಶಕ್ಕೊಳಗಾದರು. ಸರ್ವಜ್ಞನಾದ ಶಿವನಿಗೆ ಸಂಗತಿ ತಿಳಿಯಲು ಇವರನ್ನೂ, ಚೇಟಿಯರನ್ನೂ ಮಾನವ ಯೋನಿಯಲ್ಲಿ ಹಾಕಿದನು. ಸುಂದರರು ಕೈಲಾಸ ಬಿಟ್ಟು ಹೊರಡುವಾಗ ಪರಶಿವನ ಪಾದದಲ್ಲಿ ಬಿದ್ದು "ತಡುತ್ತು ಆಟ್ಕೊಳ್ಳಾಯ್" —ನನ್ನನ್ನು ಮರೆಯದಂತೆ ಕರುಣಿಸಿ ಕಾಪಾಡೆಂದು ಬೇಡಿಕೊಂಡರು. ಅದಕ್ಕೆ ಪರಶಿವನು ಒಪ್ಪಿದನು. ಸುಂದರರು ತಿರುನಾವಲೂರಿನಲ್ಲಿ ಆದಿಶೈವ ಕುಲದಲ್ಲಿ ಅವತರಿಸಿದನು. ಶೈಶವದಲ್ಲಿ ಬೀದಿಯಲ್ಲಿ ಆಟವಾಡುತ್ತಿರುವಾಗ ಇವರ ರೂಪ ಲಾವಣ್ಯಗಳಿಗೆ ಮನಸೋತ ನರಸಿಂಗ ಮುನಿಯಾರ್ ಎಂಬ ರಾಜನು ಶಿಶುವನ್ನು ಎತ್ತಿಕೊಂಡು ಸಾಕಿದನು. ಇವರಿಗೆ ಬ್ರಾಹ್ಮಣ ಸಂಪ್ರದಾಯದ ಪ್ರಕಾರ ಗರ್ಭಾಷ್ಟಮದಲ್ಲಿ ಉಪನಯನವಾಯಿತು. ಮದುವೆಯ ವಯಸ್ಸು ಬಂದಾಗ ಪುತ್ತೂರಿನ ಶಡಙ್ಗವಿ ಶಿವಾಚಾರ್ಯರೆಂಬ ಆದಿಶೈವರು ತಮ್ಮ ಮಗಳನ್ನು ಕೊಟ್ಟು ಮದುವೆ ಮಾಡಲು ಏರ್ಪಾಡಿಟ್ಟರು. ಇನ್ನೇನು ಕನ್ಯಾದಾನವಾಗಬೇಕು ಎನ್ನುವಷ್ಟರಲ್ಲಿಯೇ ಶಿವನು ಬ್ರಾಹ್ಮಣ ವೇಷ ತಾಳಿ ಬಂದು ವಿವಾಹಕಂಟಕನಾದನು. ತನ್ನಿಂದ ಸುಂದರರ ಹಿರಿಯರು ಸಾಲ ತೆಗೆದುಕೊಂಡು ವಂಶಪರಂಪರೆಯಾಗಿ ("ಅಡಿಮೈ") ಅಡಿಯಾಳುಗಳಾಗಿರಲು ಒಪ್ಪಿ ಓಲೆ ಬರೆದುಕೊಟ್ಟಿದ್ದಾರೆಂದೂ, ಆ ಸಾಲವನ್ನು ಮೊದಲು ತೀರಿಸಿ ಆಮೇಲೆ ಮದುವೆಯಾಗಬಹುದೆಂದೂ ಕುಂಟು ನೆಪಹೂಡಿ ಮದುವೆಯನ್ನು ತಪ್ಪಿಸಿ ತಿರುವೆಣ್ಣೈ ನಲ್ಲೂರಿನ ಶಿವಾಲಯದಲ್ಲಿ ಹೊಕ್ಕು ಮರೆಯಾಗಿ, "ತಡುತ್ತಾಟ್ಕೊಣ್ಡೋಮ್—ನಿನ್ನ ಬೇಡಿಕೆಯ ಪ್ರಕಾರ

ತಡೆದು ಕಾಪಾಡಿದ್ದೇವೆ. ಕೈಲಾಸದಲ್ಲಿ ನನ್ನನ್ನು ಪೂಮಾಲೆಗಳಿಂದ ಪೂಜಿಸಿದೆ. ಈಗ 'ಪಾಮಾಲೈ' (ಪದ್ಯಮಾಲೆ)ಗಳಿಂದ ಅರ್ಚನೆ ಮಾಡು; ಅಡಿಮೆಯನ್ನು ನಿರ್ಧರಿಸುವಾಗ 'ಪಿತ್ತಾ' (ಹುಚ್ಚ) ಎಂದು ನನ್ನನ್ನು ಕರೆದೆ. ಹೋಗು! ಆ ಮಾತಿನಿಂದಲೇ ತೇವಾರ (ತೇ=ದೇವರ, ಆರಂ=ಹಾರ) ಎಂಬ ಸ್ತೋತ್ರಮಾಲಿಕೆಯನ್ನು ಆರಂಭಿಸು" ಎಂದು ಅಪ್ಪಣೆಮಾಡಿ ಅಂತರ್ಧಾನನಾದನು. ಇತ್ತ ಸುಂದರರು ಅದೇ ಪ್ರಕಾರ—

"ಪಿತ್ತಾ ಪಿಱೈಶೂಡಿ ಪೆರುಮಾನೇ ಅರುಳಾಳಾ
ಎತ್ತಾನ್ ಮಱವಾದೇ ನಿನೈಕ್ಕಿನ್ಱೇನ್ ಮನತ್ತುನ್ನೈ
ವೈತ್ತಾಯ್ ಪೆಣ್ಣೈ ತೆನ್ಪಾಲ್ ವೆಣ್ಣೆಯ್ ನಲ್ಲೂರರುಳ್
ತುಱೈಯುಳ್
ಅತ್ತಾ ಉನಕ್ಕಾಳಾಯ್ ಇನಿಯಲ್ಲೇನ್ ಎನಲಾಮೇ"

ಎಂದು ಗ್ರಂಥಾರಂಭಮಾಡಿದರು. ಆಮೇಲೆ ಸುಂದರರಿಗೆ ತಿರುವಾರೂರಿನಲ್ಲಿ ಪರವೈನಾಚ್ಚಿಯಾರಾಗಿ ಹುಟ್ಟಿದ್ದ ಕಮಲಿನಿಯೊಡನೆ ಮದುವೆಯಾಯಿತು. ಹಲವಾರು ಕ್ಷೇತ್ರಗಳಲ್ಲಿ ತೀರ್ಥಯಾತ್ರೆ ಮುಗಿಸಿಕೊಂಡು ತಿರುವಱ್ಱಿಯೂರಿಗೆ ಬಂದು ಅಲ್ಲಿ ಶಙ್ಗಿಲಿಯೆಂಬ ಹೆಸರಿನಿಂದ ಹುಟ್ಟಿದ್ದ ಅನಿಂದಿತೆಯನ್ನು ಮೋಹಿಸಿದರು. ಪಾರಿಜಾತ ವೃಕ್ಷದ ಅಡಿಯಲ್ಲಿ ಸತ್ಯಮಾಡಿಕೊಂಡು ಶಙ್ಗಿಲಿಯನ್ನು ಮದುವೆಯಾದರು. ಕೆಲವು ಕಾಲಾನಂತರ ಪರವೈನಾಚ್ಚಿಯಾರ ಗೀಳು ಹತ್ತಲು ತಿರುವಾರೂರಿನ ಕಡೆ ಹೊರಟರು. ತಿರುವಱ್ಱಿಯೂರಿನ ಎಲ್ಲೆ ಬಿಟ್ಟೊಡನೆ ಅವರ ಕಣ್ಣೆರಡೂ ಇಂಗಿಹೋದುವು. ಹಾಗೆಯೇ ದಾರಿನಡೆದು ಹಲವು ಕ್ಷೇತ್ರಗಳಲ್ಲಿ ಪರಶಿವನನ್ನು ಕುರಿತು ಬೇಡಿ ಹಾಡಿ ಕಂಚಿಗೆ ಬಂದರು. ಆಗ ಅವರಿಗೆ ಎಡಗಣ್ಣು ಮತ್ತೆ ಬಂತು. ತಿರುವಾರೂರನ್ನು ತಲಪಿ ಭಗವಂತನಿಗೆ ಮೊರೆಯಿಡುತ್ತಿರುವಾಗ ಬಲಗಣ್ಣು ಕಾಣಿಸಿತು. ಕೋಪಿಸಿಕೊಂಡಿದ್ದ ಪರವೈಯಾರೊಡನೆ ಶಿವನ ಮಧ್ಯಸ್ಥಿಕೆಯಿಂದ ಮತ್ತೆ ಸೇರಿ ಬಾಳಲಾರಂಭಿಸಿದರು. ಶೇರಮಾನ್ ಪೆರುಮಾಳ್ ನಾಯನಾರ ಸ್ನೇಹಿತರಾಗಿ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ ಮಂಗಳಾಶಾಸನ ಮಾಡಿ ಕಡೆಗೆ ಇಬ್ಬರೂ ಸಶರೀರವಾಗಿ ಕೈಲಾಸಕ್ಕೆ ತೆರಳಿದರು.

ಈ ಶೈವಸಮಯಾಚಾರ್ಯರುಗಳಿಗೆ ನಾಯನಾರ್ ಅಥವಾ ಅಡಿಯಾರ್ ಎಂಬ ಹೆಸರಿದೆ. ತಿರುಜ್ಞಾನ ಸಂಬಂದರ್, ತಿರುನಾವುಕ್ಕರಶರ್ (ಅಪ್ಪರ್), ಸುಂದರರ್ — ಈ ಮೂವರು ನಾಯನಾರುಗಳ ಗ್ರಂಥಕ್ಕೆ ತೇವಾರಮ್ ಎಂಬ ಹೆಸರಿದೆ. ಮಾಣಿಕ್ಯ ವಾಚಕರ ತಿರುವಾಚಕವನ್ನು ತೇವಾರದೊಡನೆ ಸೇರಿಸಿ 'ತೇವಾರ ತಿರುವಾಚಕ'ವೆಂದು ಒಟ್ಟಾಗಿ ಹೇಳುವುದು ಶೈವರ ಪದ್ಧತಿ.

## ವೈಷ್ಣವ ಆಳ್ವಾರುಗಳು (ಕ್ರಿ. ಶ. ೬೦೦—೮೦೦)

ಶೈವರ ಅಡಿಯಾರುಗಳಂತೆ ಈ ಆಳ್ವಾರುಗಳು ಪರಮ ವಿಷ್ಣು ಭಕ್ತರು. ಭಗವದ್ಭಕ್ತಿಯಲ್ಲಿ ಮುಳುಗಿದವರು ಎಂದರ್ಥ. ಇವರು ಹನ್ನೆರಡು ಮಂದಿ. ಇವರಲ್ಲಿ ಜಾತಿವ್ಯತ್ಯಾಸ ಕಡಮೆ. ಅಂತ್ಯಜರು, ಸ್ತ್ರೀಯರು ಮೊದಲುಗೊಂಡು ಆಳ್ವಾರ ಕೂಟದಲ್ಲಿ ಸೇರಿದ್ದಾರೆ. ತಿರುಪ್ಪಾಣಾಳ್ವಾರು ಅಂತ್ಯಜರು, ನಮ್ಮಾಳ್ವಾರು ವೆಳ್ಳಾಳರು, ತಿರುಮಂಗೈಯಾಳ್ವಾರು ಕಳ್ಳರು; ಆಂಡಾಳ್ ಹೆಂಗಸು. ಆದರೂ ಇವರ ಹಿರಿಮೆಯನ್ನು ಕಂಡುಕೊಂಡು ಬ್ರಾಹ್ಮಣರು ವೈಷ್ಣವಾಲಯಗಳಲ್ಲಿ ಇವರ ವಿಗ್ರಹಗಳನ್ನು ಪ್ರತಿಷ್ಠಿಸಿ ಇವರು ಹಾಡಿದ ಪಾಶುರಗಳನ್ನು ಕಾಲಕ್ಷೇಪಮಾಡುವುದು ಇಂದಿಗೂ ವಾಡಿಕೆ. ಪೊಯ್‌ಗೈಯಾರ್, ಪೂದತ್ತಾರ್, ಪೇಯಾರ್ (ಸರೋಯೋಗಿ, ಭೂತಯೋಗಿ, ಮಹಾಯೋಗಿ) — ಈ ಮೂವರೂ ಕ್ರಿ. ಶ. ೬ನೆಯ ಶತಮಾನದಲ್ಲಿದ್ದ ಮೊದಲಾಳ್ವಾರುಗಳು. ಪೊಯ್‌ಗೈ ಮತ್ತು ಪೇಯಾಳ್ವಾರುಗಳು ವಿಷ್ಣುಕಂಚಿಯಲ್ಲಿ ವರದರಾಜನಿಗೆ ಮಂಗಳಾಶಾಸನ ಮಾಡಿದರು. ಆಗ ಅಲ್ಲಿ ಇಮ್ಮಡಿ ಪರಮೇಶ್ವರವರ್ಮ ಪಲ್ಲವನು ರಾಜನಾಗಿದ್ದನು. ಇವನ ಕಾಲ ಸುಮಾರು ಕ್ರಿ. ಶ. ೬೯೦. ಇವನೇ ವಿಷ್ಣುಕಂಚಿಯನ್ನು ಕಟ್ಟಿದವನು. ಈ ಮೊದಲಾಳ್ವಾರುಗಳು ಹಾಡಿರುವ ಪದ್ಯಮಾಲೆ ನಾಲ್ಕು ಸಾವಿರ ಪ್ರಬಂಧಗಳಲ್ಲಿ ಸೇರಿದೆ. ವಾಮನ, ನಾರಸಿಂಹ, ರಾಮ, ಕೃಷ್ಣಾದ್ಯವತಾರಗಳನ್ನು ತಮ್ಮ ಪಾಶುರಗಳಲ್ಲಿ ವರ್ಣಿಸಿದ್ದಾರೆ. ಇವರು ಶ್ರೀರಂಗ, ಕುಂಭಕೋಣ, ತಿರುಮಾಲಿರುಞ್ಜೋಲೈ, ತಿರುಕ್ಕೋಟ್ಟ

ಯೂರು ಮುಂತಾದ ಕ್ಷೇತ್ರಗಳಲ್ಲಿ ಮಂಗಳಾಶಾಸನ ಮಾಡಿದರು. ಇವರ ಗ್ರಂಥವೆಲ್ಲ "ಅನ್ದಾದಿ" (ಅಂತ್ಯಾಕ್ಷರಿ)ಗಳಾಗಿವೆ. "ಅನ್ದಾದಿ" ಎಂದರೆ ಒಂದು ಪದ್ಯದ ಕಡೆಯ ಪದ ಮುಂದಿನ ಪದ್ಯದ ಆದಿಯಾಗಿರುವುದು ಎಂದರ್ಥ.

**ತಿರುಮೞಿಶೈಯಾೞ್ವಾರು.**—ತಿರುಮೞಿಶೈ ಎಂಬ ಊರಿನಲ್ಲಿ ಕ್ರಿ. ಶ. ೭ನೇ ಶತಮಾನದಲ್ಲಿ ಹುಟ್ಟಿದರು. ಮೊದಲಿಗೆ ಶೈವರಾಗಿದ್ದರು. ಅನಂತರ ವೈಷ್ಣವರಾಗಿ ಮಾರ್ಪಟ್ಟು ವಿಷ್ಣುಪಾರಮ್ಯವನ್ನೇ ವಿಶೇಷವಾಗಿ ಕೊಂಡಾಡಿ ಗ್ರಂಥ ಬರೆದರು. ಶೈವ, ಜೈನ, ಬೌದ್ಧಮತಗಳನ್ನು ಬಹುತೀವ್ರವಾಗಿ ಖಂಡನೆಮಾಡಿದರು. "ನಾನ್ಮುಗನ್ ತಿರುವನ್ದಾದಿ" ಎಂಬ ಗ್ರಂಥವನ್ನು ಬರೆದಿದ್ದಾರೆ. ಪರಮತಖಂಡನೆಯೇ ಇದರ ಮುಖ್ಯಾಶಯ. "ತಿರುಚ್ಚನ್ದವಿರುತ್ತಮ್" ಎಂಬ ೧೨೦ ಪಾಶುರಗಳುಳ್ಳ ವೇದಾಂತ ಗ್ರಂಥ ಬರೆದಿದ್ದಾರೆ. ಇದರ ಶೈಲಿ ಸ್ವಲ್ಪ ಕಷ್ಟ. ವಿಷಯ ಪ್ರತಿಪಾದನೆಯಲ್ಲಿ ಒಂದು ಜೋರಿದೆ, ಕಾವಿದೆ. ಈ ಪದ್ಯಮಾಲಿಕೆ ದಿವ್ಯ ಪ್ರಬಂಧದಲ್ಲಿ ಒಂದು ಭಾಗವಾಗಿದೆ. ವಾಗ್ಗುಂಫನದಲ್ಲಿ ಒಂದು ಬಗೆಯ ಇಂಪು ಕಾಣುತ್ತದೆ.

ಒಂದು ಬಾರಿ ಇವರು ತಮ್ಮ ಶಿಷ್ಯನಾದ ಕಣಿಕಣ್ಣನೊಡನೆ ವಿಷ್ಣುಕಂಚಿಗೆ ತೆರಳಿದಾಗ ಒಂದನೆಯ ಮಹೇಂದ್ರವರ್ಮ ಪಲ್ಲವನನ್ನು ಹೊಗಳಿ ಹಾಡುವುದಿಲ್ಲವೆಂದು ಹೇಳಿ ಅವನ ಆಗ್ರಹಕ್ಕೆ ಪಾತ್ರರಾದರು. ರಾಜ ಆೞ್ವಾರನ್ನು ಕಣಿಕಣ್ಣನೊಡನೆ ತನ್ನ ರಾಜ್ಯದಿಂದ ತೊಲಗಬೇಕೆಂದು ಕಟ್ಟಪ್ಪಣೆಮಾಡಿದನು. ಆಗ ಆೞ್ವಾರು ಕಂಚಿಯ ದೇವಾಲಯಕ್ಕೆ ಹೋಗಿ, ದೇವನ ಮುಂದೆ ನಿಂತು ಹೇಳುವ ಮಾತಿನ ಜೋರು ಬಹಳ ಸ್ವಾರಸ್ಯವಾಗಿದೆ:

"ಕಣಿಕಣ್ಣನ್ ಪೋಗಿನ್ರಾನ್ ಕಾಮರು ಪೂಙ್ಗಚ್ಚಿ
ಮಣಿವಣ್ಣಾ ನೀ ಕಿಡಕ್ಕವೇಣ್ಡಾ ಮ್—ತುಣಿವುಡೈಯ
ಶೆನ್ನಾಪ್ಪುಲವನುಮ್ ಪೋಗಿನ್ರೇನ್ ನೀಯುಮುನ್ರನ್
ಪೈನ್ನಾಗಪ್ಪಾಯ್ ಶುರುಟ್ಟಿಕ್ಕೊಳ್"

ಎಂದು ಹಾಡಿದೊಡನೆ ವರದರಾಜನು ಭಕ್ತಪರಾಧೀನನಲ್ಲವೆ?—ತನ್ನ ಹಾಸಿಗೆಯನ್ನು ಮುದುರಿಕೊಂಡು ಗುರುಶಿಷ್ಯರ ಹಿಂದೆ ಹೊರಟನು. ಈ ಸಂಗತಿ ರಾಜನ ಕಿವಿ ಮುಟ್ಟಲು ಅವನು ಓಡಿಬಂದು ಆೞ್ವಾರಿಗೆ ಎರಗಿ ಕ್ಷಮೆ ಬೇಡಿದನು. ವರಕವಿಯಾದ ಆೞ್ವಾರು ಒಡನೆ ಮೇಲಿನ ಪಾಶುರವನ್ನು ತಿರುಗಿಸಿ—

"ಕಣಿಕಣ್ಣನ್ ಪೋಕ್ಕೊೞಿನ್ದಾನ್ ಕಾಮರು ಪೂಙ್ಗಚ್ಚಿ
ಮಣಿವಣ್ಣಾ ನೀ ಕಿಡಕ್ಕವೇಣ್ಡುಮ್—ತುಣಿವುಡೈಯ
ಶೆನ್ನಾಪ್ಪುಲವನುಮ್ ಪೋಕ್ಕೊೞಿನ್ದೇನ್ ನೀಯುಮುನ್ಱನ್
ಪೈನ್ನಾಗಪ್ಪಾಯ್ ವಿರಿತ್ತುಕ್ಕೊಳ್"

ಎಂದು ಹಾಡಿದರು. ವರದರಾಜನು ಭಕ್ತನ ಅಪ್ಪಣೆಯನ್ನು ಶಿರಸಾವಹಿಸಿ ಮತ್ತೆ ಹಾವಿನಹಾಸಿಗೆಯನ್ನು ಹರಹಿ ಪವಡಿಸಿದನು.

**ನಮ್ಮಾೞ್ವಾರು.**— ಇವರಿಗೆ ಶಠಕೋಪರ್ (ಜನನಕಾಲದಲ್ಲಿ ಶಠವಾಯುವನ್ನು ಧಿಕ್ಕರಿಸಿದವರು), ಪರಾಂಕುಶರ್ ಎಂಬ ಹೆಸರುಗಳೂ ಉಂಟು. ತಾಮ್ರಪರ್ಣಿನದಿಯ ದಡದಲ್ಲಿರುವ ಆೞ್ವಾರ್ ತಿರುನಗರಿ (ಆಗಿನ ಹೆಸರು ತಿರುಗ್ಯೈ)ಯಲ್ಲಿ ವೇಳಾಳ ಕುಲದಲ್ಲಿ ಅವತರಿಸಿದರು. ೭ನೆಯ ಅಥವಾ ೯ನೆಯ ಶತಮಾನದಲ್ಲಿ ಇವರು ಇದ್ದಿರಬಹುದೆಂದು ಮತಭೇದಗಳಿವೆ. ಇವರ ತಂದೆ ಕಾರಿ, ತಾಯಿ ಉಡಯನಙ್ಗೈ. ನಮ್ಮಾೞ್ವಾರು ಹುಟ್ಟಿದೊಡನೆ ಜ್ಞಾನಸಿಧಿಯಾಗಿದ್ದರು. ಶೈಶವದಲ್ಲಿ ಅವರು ತಾಯ ಸ್ತನ್ಯಪಾನ ಮಾಡಲೂ ಇಲ್ಲ. ಅದಕ್ಕಾಗಿ ಅಳಲೂ ಇಲ್ಲ. ಆದರೂ ಪುಷ್ಟಿಯಾಗಿ ಬೆಳೆಯುತ್ತಲೇ ಇದ್ದರು. ಅವರ ತಾಯಿ ತಂದೆ ಊರಿನ ದೇವಸ್ಥಾನದ ಹುಣಿಸೆಮರಕ್ಕೆ ತೊಟ್ಟಲು ಕಟ್ಟಿ ಮಗುವನ್ನು ಮಲಗಿಸಿದರು. ಮಗು ಮರದ ಕೆಳಗೆ ಯೋಗಿಯಂತೆ ಕುಳಿತು ಪಲವಾರು ಪಾಶುರಗಳನ್ನು ಹಾಡಲಾರಂಭಿಸಿತು. ಆ ಮಾರ್ಗವಾಗಿ ಬಂದ ಮಧುರಕವಿಯಾೞ್ವಾರು ಇದನ್ನು ಕಂಡು ಆಶ್ಚರ್ಯಪಟ್ಟು ಅವರ ಬಾಯಿಂದ ಬಂದ ಪಾಶುರಗಳೆಲ್ಲವನ್ನೂ ಬರೆದಿಟ್ಟರು. ಮಗುವಿನ ಅನ್ಯಾದೃಶ ಸಾಮರ್ಥ್ಯವನ್ನು ಕಂಡು ತಾಯಿತಂದೆಗಳು ಬಹಳ ಎಚ್ಚರಿಕೆಯಿಂದ ಸಾಕಿದರು. ಸ್ವಲ್ಪ ವಯಸ್ಸಾದಮೇಲೆ ನಮ್ಮಾೞ್ವಾರ ಕವಿತಾಶಕ್ತಿ

ಪ್ರತಿಭೆ ಎಲ್ಲರನ್ನೂ ಆಕರ್ಷಿಸಿದುವು. ಜನ ಇವರನ್ನು ಮಹಾಕವಿಯೆಂದು ಸನ್ಮಾನಿಸಿದರು. ನಾಲ್ಕು ಸಾವಿರ ದಿವ್ಯ ಪ್ರಬಂಧದಲ್ಲಿ ಹೆಚ್ಚುಭಾಗ ನಮ್ಮಾೞ್ವಾರ ಬಾಯಿಂದ ಹೊರಟದ್ದು. ತಿರುವಿರುತ್ತಮ್, ತಿರುವಾಶಿರಿಯಮ್, ಪೆರಿಯ ತಿರುವನ್ದಾದಿ, ತಿರುವಾಯ್ಮೊೞಿ—ಇವೆಲ್ಲವೂ ಇವರ ಗ್ರಂಥಗಳೇ. ಇವು ಚತುರ್ವೇದಗಳ ಸಾರಸಂಗ್ರಹಗಳೆನ್ನಬಹುದು. ಮೊದಲಿನ ಮೂರು ಗ್ರಂಥಗಳು ಚಿಕ್ಕವು. ತಿರುವಾಯ್ಮೊೞಿಯಲ್ಲಿ ಒಂದು ಸಾವಿರ ಪಾಶುರಗಳಿವೆ. ಸಂಸಾರ ಬಂಧನದಿಂದ ತಪ್ಪಿಸಿಕೊಂಡು ಮೋಕ್ಷೋಪಾಯ ಬೋಧಿಸುವುದೇ ಈ ಪದ್ಯಗಳ ಗುರಿ. ನಮ್ಮಾೞ್ವಾರ ಗ್ರಂಥಗಳಲ್ಲಿ ಮಾನವಸ್ತುತಿ ಐತಿಹಾಸಿಕ ವಿಷಯಗಳ ಸುಳಿವೇ ಇಲ್ಲ. ಅರ್ಥಪಂಚಕಗಳು ಸೂಚಿತವಾಗುತ್ತವೆ. ಎಲ್ಲವೂ ಭಗವಂತನ ಲೀಲಾ ವಿನೋದಗಳ, ಮಹಿಮೆಗಳ ಚಿತ್ರ. ಜಾತಿಮತ ಭೇದಗಳ ಮಾತಂತೂ ಇಲ್ಲವೇ ಇಲ್ಲ.

ನಮ್ಮಾೞ್ವಾರರಿಗೆ ಸ್ವಂತ ಪಾಂಡಿತ್ಯದೊಂದಿಗೆ "ಕುಱಳ್" ಪಾಂಡಿತ್ಯವೂ ಚೆನ್ನಾಗಿತ್ತು. ತಿರುಕ್ಕುಱಳಿನ ಪದ್ಯ ಭಾಗಗಳನ್ನು ತಮ್ಮ ತಿರುವಾಯ್ಮೊೞಿಯಲ್ಲಿ ಧಾರಾಳವಾಗಿ ಉಪಯೋಗಿಸಿಕೊಂಡಿರುವುದಕ್ಕೆ ಗ್ರಂಥಸ್ಥವಾದ ಆಧಾರಗಳು ಹಲವಿವೆ.

**ಮಧುರಕವಿಯಾೞ್ವಾರು.**— ತಿರುಕ್ಕೋಳೂರಿನಲ್ಲಿ ಹುಟ್ಟಿದರು. ಶ್ರೀಮಂತನೊಬ್ಬನ ರಕ್ಷಣೆಯಲ್ಲಿದ್ದರು. ಮೊದಲಿನಿಂದಲೂ ದೈವಭಕ್ತರಾಗಿದ್ದುದರಿಂದ ಉತ್ತರ ದೇಶಯಾತ್ರೆಮಾಡುತ್ತ ಅಯೋಧ್ಯೆಗೆ ಬರುತ್ತಿರುವಾಗ ಒಂದುರಾತ್ರಿ ತೆಂಕಣದಿಕ್ಕಿನಲ್ಲಿ ಬೆಳಗುತ್ತಿದ್ದ ತೇಜಸ್ಸೊಂದನ್ನು ಕಂಡು, ಅದೇನಿರಬಹುದೆಂದು ತಿಳಿಯಲು ತೆಂಕಣದಿಕ್ಕಿನಲ್ಲಿಯೇ ನಡೆ ನಡೆದು ಬಂದು ಕುರುಗೂರನ್ನು ತಲಪಿದರು. ಕಡೆಗೆ ಊರಿನ ದೇವಾಲಯದ ಹುಣಿಸೆಮರದ ಪೊಟರೆಯಲ್ಲಿ ಬಿಜಯಮಾಡಿಸಿದ್ದ ನಮ್ಮಾೞ್ವಾರನ್ನು ಕಂಡು :

"ಶೆತ್ತದಿನ್ ವಯಿಱ್ಱಿಲ್ ಶಿಱಿಯದು ಪಿಱನ್ದಾಲ್
ಎತ್ತೈತ್ತಿನ್ನು ಎಙ್ಗೇ ಕಿಡಕ್ಕುಮ್"

ಎಂಬ ಪ್ರಶ್ನೆಮಾಡಿದರು. ನಮ್ಮಾಳ್ವಾರು ಅದಕ್ಕೆ ಉತ್ತರವಾಗಿ "ಅತ್ತೈತ್ತಿನ್ರು ಅಜ್ಗೇ ಕಿಡಕ್ಕುಮ್" ಎಂದು ಹೇಳಿಬಿಟ್ಟರು. ಇದನ್ನು ಕೇಳಿದೊಡನೆ ಮಧುರಕವಿಗೆ ಪರಮಾನಂದವಾಗಿ ನಮ್ಮಾಳ್ವಾರ ಪಾದ ಗಳಿಗೆರಗಿ ಶಿಷ್ಯರಾದರು. ತಮ್ಮ ಆಚಾರ್ಯನನ್ನು ಕುರಿತು ೧೧ ಪಾಶುರ ಗಳುಳ್ಳ "ಕಣ್ಣಿನುಣ್ ಶಿಱುತ್ತಾಮ್ಬು" (ಗ್ರಂಥಿಮುತ್ತೂಕ್ಷ್ಮಹ್ರಸ್ವರಜ್ಜು) ಎಂಬ ಆಚಾರ್ಯಸ್ತವವನ್ನು ಬರೆದರು. ಇದು ದಿವ್ಯ ಪ್ರಬಂಧದಲ್ಲಿ ಒಂದು ಭಾಗವಾದ ಸಂಪ್ರದಾಯ ಗ್ರಂಥ.

**ಕುಲಶೇಖರಾಳ್ವಾರು.**— ತಿರುವಾಂಕೂರಿನ ರಾಜರಾಗಿದ್ದರು. ಒಂಬತ್ತನೆಯ ಶತಮಾನದ ಆದಿಭಾಗದಲ್ಲಿದ್ದಿರಬಹುದೆಂದು ತೋರುತ್ತದೆ. ಇವರಿಗೆ ಭಗವದ್ಭಕ್ತಿಯಲ್ಲಿ ವಿಶೇಷ ಆಸೆ. ಇವರ ಜೀವನದ ಗುಟ್ಟೇ ಅದು. ಒಂದುಬಾರಿ ರಾಮಾಯಣ ಕಾಲಕ್ಷೇಪಕಾಲದಲ್ಲಿ ಶ್ರೀರಾಮನು ಏಕಾಂಗ ಸಾಹಸದಿಂದ ಖರದೂಷಣರೇ ಮುಂತಾದ ಹದಿನಾಲ್ಕು ಸಹಸ್ರ ರಾಕ್ಷಸರನ್ನು ಧ್ವಂಸಮಾಡಿದನು ಎಂಬ ಕಥಾಸಂದರ್ಭವನ್ನು ಕೇಳಿ ದೊಡನೆ ಕುಲಶೇಖರಾಳ್ವಾರಿಗೆ ತಾವು ಶ್ರೀರಾಮನಿಗೆ ಸಹಾಯವೆಸಗ ದಿದ್ದುದು ತಮ್ಮ ಅರಸುತನಕ್ಕೆ ಕಳಂಕವೆಂದುಕೊಂಡರು; ಕೂಡಲೆ ಚತುರಂಗ ಬಲ ಸಮೇತರಾಗಿ ಶ್ರೀರಾಮನಿಗೆ ನೆರವಾಗಲು ಹೊರಟರು. ಮಿಕ್ಕ ಭಕ್ತರು ಅವರಿಗೆ ಸಮಾಧಾನ ಹೇಳಿ ಶ್ರೀರಾಮನು ಜಯಶಾಲಿ ಯಾಗಿ ಸೀತೆಯೊಡನೆ ಹಿಂದಿರುಗಿದನು; ನೀವು ಈಗ ಹೋಗಬೇಕಾಗಿಲ್ಲ ವೆಂದು ತಿಳಿಸಿದರು. ಇದರಿಂದ ಕುಲಶೇಖರರಿಗೆ ಭಕ್ತಿ ಪಾರವಶ್ಯತೆ ಎಷ್ಟಿತ್ತೆಂಬುದು ಗೊತ್ತಾಗುತ್ತದೆ.

ಕುಲಶೇಖರರಿಗೆ ಎಂದಿಗೆ ಶ್ರೀರಂಗಕ್ಕೆ ಹೋಗಿ ರಂಗನಾಥನ ಸೇವೆಮಾಡಿಯೇನು ಎಂಬ ಕಾತರ ಬಹಳವಾಗಿತ್ತು. ಆದ್ದರಿಂದ ದಿನೆ ದಿನವೂ ರಂಗಯಾತ್ರೆಗೆ ಸಿದ್ಧರಾಗುತ್ತಿದ್ದರು. ಅವರಂಥ ಅರಸನನ್ನು ಕಳೆದುಕೊಳ್ಳಲು ಪ್ರಜೆಗಳಿಗೆ ಇಷ್ಟವಿರಲಿಲ್ಲ. ಅದಕ್ಕಾಗಿ ಅವರು ಹಲವಾರು ಅಡಚಣೆಗಳನ್ನು ತಂದೊಡ್ಡಿ ಕುಲಶೇಖರರನ್ನು ತಡೆಯು ತ್ತಿದ್ದರು. ಕಡೆಗೆ ಆಳ್ವಾರ ಆಸೆ ಈಡೇರಿತು. ಅವರು ಶ್ರೀರಂಗಕ್ಕೆ ಬಂದು ಅಲ್ಲಿ ರಂಗನಾಥನನ್ನು ಆಪಾದಮಸ್ತಕವಾಗಿ ಅನುಭವಿಸಿದರು.

"ಮುಕುನ್ದಮಾಲೆ"ಯೆಂಬ ಸಂಸ್ಕೃತ ಸ್ತೋತ್ರಗ್ರಂಥವನ್ನು ಬರೆದರು. ಇದನ್ನು ಬಾಯಿಪಾಠ ಮಾಡದವರೇ ಇಲ್ಲ. ಇದರಲ್ಲಿ ಹೇಳಿರುವ ವಿಷಯ ವೇದಾಂತಪರವಾಗಿದ್ದರೂ ಶೈಲಿ ಬಹಳ ಸರಳವಾಗಿದೆ. ಪ್ರತಿ ಶ್ಲೋಕವೂ ಮಾನವ ಹೃದಯತಳ ಮುಟ್ಟುತ್ತದೆ. ತಮಿಳಿನಲ್ಲಿ "ಪೆರುಮಾಳ್ ತಿರುಮೊೞಿ" ಎಂಬ ೧೦೫ ಪಾಶುರಗಳುಳ್ಳ ಗ್ರಂಥ ಬರೆದಿದ್ದಾರೆ. ಇದು ನಾಲ್ಕು ಸಾವಿರ ದಿವ್ಯ ಪ್ರಬಂಧದಲ್ಲಿ ಒಂದು ಭಾಗವಾಗಿದೆ.

**ಪೆರಿಯಾೞ್ವಾರು.**— ಇವರು ಬ್ರಾಹ್ಮಣರು. ವಿಷ್ಣುಚಿತ್ತರು ಎಂಬ ಹೆಸರೂ ಉಂಟು. ಕ್ರಿ. ಶ. ೮ನೆಯ ಶತಮಾನದಲ್ಲಿ ಶ್ರೀ ವಿಲ್ಲಿ ಪುತ್ತೂರಿನಲ್ಲಿದ್ದರು. ಆದ್ದರಿಂದ ಇವರಿಗೆ "ವಿಲ್ಲಿಪುತ್ತೂರ್ ಕೋನ್" ಎಂಬ ಅನ್ವರ್ಥನಾಮಧೇಯವಿದೆ. ಶ್ರೀ ವಿಲ್ಲಿಪುತ್ತೂರಿನ ವಟಪತ್ರ ಶಾಯಿಗೆ ಪುಷ್ಪಕೈಂಕರ್ಯಮಾಡುತ್ತಿದ್ದರು. ವಲ್ಲಭಪಾಂಡ್ಯನ ಆಸ್ಥಾನ ದಲ್ಲಿ ವಿಷ್ಣುಪಾರಮ್ಯವನ್ನು ಸ್ಥಾಪನೆಮಾಡಲು ವಾದ ಹೂಡಿ ಸಂದರ್ಭಕ್ಕೆ ತಕ್ಕ ಶ್ರುತಿ, ಸ್ಮೃತಿಗಳಿಂದ ಆಧಾರವಾಕ್ಯಗಳನ್ನು ಎತ್ತಿಹೇಳಿ ಪ್ರತಿ ಪಕ್ಷ ದವರನ್ನು ಸೋಲಿಸಿ ವಿದ್ಯಾಶುಲ್ಕವನ್ನು ಗೆದ್ದರು. ಪಾಂಡ್ಯರಾಜನಿಗೆ ಪೆರಿಯಾೞ್ವಾರಲ್ಲಿ ಬಹಳ ಗೌರವ ಹುಟ್ಟಿತು. ಅವರನ್ನು ಆನೆಯ ಮೇಲೆ ಕೂರಿಸಿ ಸಕಲ ವೈಭವಗಳೊಡನೆ ತನ್ನ ರಾಜಧಾನಿಯಲ್ಲಿ ಮೆರವಣಿಗೆ ಮಾಡಿಸಿದನು. ಆ ಕಾಲದಲ್ಲಿ ಶ್ರೀಮನ್ನಾರಾಯಣನು ಗರುಡಾರೂಢ ನಾಗಿ ವಾಯುಮಾರ್ಗದಲ್ಲಿ ಪೆರಿಯಾೞ್ವಾರಿಗೆ ಕಾಣಿಸಿಕೊಳ್ಳಲು ಅವನಿಗೆ ಮಂಗಳಾಶಾಸನ ಮಾಡಲಾರಂಭಿಸಿದರು. ಈ ಮಂಗಳಾಶಾಸನದ ಪದ್ಯ ಮಾಲಿಕೆಯೇ "ತಿರುಪ್ಪಲ್ಲಾಣ್ಡು"; ೧೨ ಪಾಶುರಗಳುಳ್ಳದ್ದು. ಇದರಲ್ಲಿ ಶ್ರೀಮನ್ನಾರಾಯಣನಿಗೆ ಪಂಚಾಯುಧಗಳಿಗೆ, ಲಕ್ಷ್ಮಿಗೆ, ವಿಷ್ಣು ಭಕ್ತರಿಗೆ ಮಂಗಳಾಶಾಸನ ಮಾಡಿದ್ದಾರೆ.

"ವಾೞಾಟ್ಪಟ್ಟು ನಿನ್ಱೀರುಳ್ಳೀರೇಲ್ ವನ್ದು
ಮಣ್ಣುಮಣಮುಮ್ ಕೊಣ್ಮಿನ್
ಕೂೞಾಟ್ಪಟ್ಟು ನಿನ್ಱೀರ್ಗಳೈ ಎಙ್ಗಳ್ ಕುೞುವಿನಿಲ್ ಪುಗುದ
ಲೊಟ್ಟೋಮ್"

[ಭಗವಂತನ ಸೇವೆಗೆ ಬದ್ಧಕಂಕಣರಾಗಿದ್ದರೆ ಬನ್ನಿ, ಅವನ ಮದುವೆಗಾಗಿ ಮೃತ್ಸಂಗ್ರಹಣಕ್ಕೆ ಹೋಗೋಣ; ಇಲ್ಲವೆ ಕೂಳಿಗೆ ಆಳುಗಳಾಗಿದ್ದರೆ ಅಂಥವರನ್ನು ನಮ್ಮ ಕೂಟದಲ್ಲಿ ಸೇರಿಸುವುದಿಲ್ಲ] ಎಂದು ಮೂರನೆಯ ಪಾಶುರದಲ್ಲಿ ಹಾಡಿರುವುದನ್ನು ನೋಡಿದರೆ ಪೆರಿಯಾೞ್ವಾರ ವಾಕ್ ಸ್ಥೈರ್ಯ, ನಿರ್ಭೀತಿ ಕಾಣಿಸುತ್ತದೆ.

ಇವರ 'ತಿರುಪ್ಪಲ್ಲಾಣ್ಡು' ಸಂಪ್ರದಾಯ ಗ್ರಂಥ. ಇದನ್ನು ಶ್ರೀವೈಷ್ಣವ ದೇವಾಲಯಗಳಲ್ಲಿ, ಮನೆಗಳಲ್ಲಿ ತಿರುವಾರಾಧನ ಕಾಲಗಳಲ್ಲಿ, ಪ್ರಬಂಧ ಕಾಲಕ್ಷೇಪ ಕಾಲದಲ್ಲಿ ಅನುಸಂಧಾನ ಮಾಡುವುದು ವಾಡಿಕೆ. ಪೆರಿಯಾೞ್ವಾರು ಅನುಗ್ರಹಿಸಿರುವ 'ಪೆರಿಯಾೞ್ವಾರ್ ತಿರುಮೊೞಿ'ಯಲ್ಲಿ ೪೬೧ ಪಾಶುರಗಳಿವೆ. ಇವುಗಳಲ್ಲಿ ಶ್ರೀಕೃಷ್ಣನ ಬಾಲಲೀಲೆಗಳು ವರ್ಣಿತವಾಗಿವೆ.

**ಆಣ್ಡಾಳ್.**—ಪೆರಿಯಾೞ್ವಾರ ಮಗಳು. ಈಕೆಗೆ ಗೋದಾದೇವಿಯೆಂಬ ಮತ್ತೊಂದು ಹೆಸರಿದೆ. ಈಕೆಯನ್ನು ಆೞ್ವಾರ ಗೋಷ್ಠಿಯಲ್ಲಿ ಸೇರಿಸಿ ಶ್ರೀ ವೈಷ್ಣವರು ಗೌರವಿಸುತ್ತಿದ್ದಾರೆ. ಈಕೆಯೊಬ್ಬ ದೊಡ್ಡ ಕವಯಿತ್ರಿ. "ನಾಚ್ಚಿಯಾರ್ ತಿರುಮೊೞಿ"ಯೆಂಬ ಗ್ರಂಥ ಈಕೆಯ ಕೃತಿ. ೧೪೩ ಪಾಶುರಗಳಿವೆ. ನಾಲ್ಕು ಸಾವಿರ ದಿವ್ಯಪ್ರಬಂಧದಲ್ಲಿ ಇದೂ ಒಂದು ಭಾಗ. ಈಕೆಯ 'ತಿರುಪ್ಪಾವೈ' ಎಂಬ ೩೦ ಪದ್ಯಗಳುಳ್ಳ ಗೀತೆ ಬಹು ಶ್ರೇಷ್ಠವಾದುದು. ಉಯ್ಯಕ್ಕೊಣ್ಡಾರ್ ಇದನ್ನು ಕುರಿತು "—ಇನ್ನಿಶೈಯಾಲ್ ಪಾಡಿಕ್ಕೊಡುತ್ತಾಳ್ ನಱ್ಪಾಮಾಲೈ ...." ಎಂದು ಹೇಳಿದ್ದಾರೆ.

ಹಿಂದೆ ಗೊಲ್ಲಕನ್ನೆಯರು ಶ್ರೀಕೃಷ್ಣನನ್ನು ತಮ್ಮ ಇನಿಯನನ್ನಾಗಿ ವರಿಸಿಕೊಳ್ಳಲು, ನಾಡು ಸುಭಿಕ್ಷದಲ್ಲಿ ನಲಿಯಲು, "ಪಾವೈ ನೋನ್ಬು" ಎಂಬ ನೋಂಪಿಯನ್ನು ಆಚರಿಸುತ್ತಿದ್ದರಂತೆ. ಆ ವ್ರತವನ್ನೇ ಆಂಡಾಳ್ ತಮ್ಮ ತಿರುಪ್ಪಾವೈ ಗ್ರಂಥದಲ್ಲಿ ವಿವರಿಸಿರುತ್ತಾರೆ. 'ಪಾವೈ ನೋನ್ಬು' (=ಕನ್ಯಾವ್ರತ) ಎಂದರೆ ಕನ್ನೆಯರು ಮಾರ್ಗಶಿರ ಮಾಸದ ಆದಿಯಿಂದ ತೊಡಗಿ ಹುಣ್ಣಿಮೆಗೆ ಸರಿಯಾಗಿ ಮುಗಿಸುವ ಒಂದು ವ್ರತ.

ಆಣ್ಡಾಳಿಗೆ 'ಶೂಡಿ ಕ್ಕೊಡುತ್ತ ನಾಚ್ಚಿಯಾರ್' ಸೂಡಿ ಕೊಟ್ಟ ನಾಯಿಕೆ ಎಂಬ ಹೆಸರು ಪ್ರಸಿದ್ಧವಾಗಿದೆ. ಈಕೆಯ ತಂದೆ ವಿಷ್ಣುಚಿತ್ತರು. ದೇವರಿಗೆಂದು ಕಟ್ಟಿಟ್ಟಿದ್ದ ಸಿರಿಮಾಲೆಯನ್ನು ತಾನು ಮುಡಿದು ಕನ್ನಡಿಯಲ್ಲಿ ನೋಡಿಕೊಂಡು, ತಂದೆಯ ಭಯದಿಂದ ಆ ಮಾಲೆಯನ್ನು ಹಾಗೆಯೇ ಕಟ್ಟಿಟ್ಟಳು. ವಿಷ್ಣುಚಿತ್ತರು ಅದನ್ನು ದೇವರಿಗೆ ಸಮರ್ಪಿಸಲು ಹೋದಾಗ ಅದರಲ್ಲಿ ಒಂದು ನಿಡುಕೂದಲಿತ್ತು. ಒಡನೆ ಅದು ಅನುಭೂತ ಮುಕ್ತವೆಂಬುದು ಅವರಿಗೆ ಗೊತ್ತಾಯಿತು. ತಮ್ಮ ಮಗಳಾದ ಆಂಡಾಳ್ ಆ ಕೆಲಸಮಾಡಿರಬಹುದೆಂದು ದೇವರಿಗೆ ಅದನ್ನು ಸಮರ್ಪಿಸದೆ ಚಿಂತಿಸುತ್ತ ಮಲಗಿದರು. ದೇವರು ಅವರ ಕನಸಿನಲ್ಲಿ ಕಾಣಿಸಿಕೊಂಡು ಆ ಸಿರಿಮಾಲೆ ತನಗೆ ಬಹುಪ್ರಿಯವಾದುದೆಂದು ಆಂಡಾಳನ್ನು ತಾನೇ ಮದುವೆಯಾಗುವುದಾಗಿ ತಿಳಿಸಿದನು. ವಿಷ್ಣುಚಿತ್ತರಿಗೆ ಬಹಳ ಸಂತೋಷವಾಯಿತು. ತಮ್ಮ ಪ್ರಾಪ್ತವಯಸ್ಕಳಾದ ಮುದ್ದುಕುವರಿಯನ್ನು ವಡಪೆರುಙ್ಗೋಯಿಲುಡೈಯಾನಿಗೆ (ಉತ್ತರದ ದೊಡ್ಡ ದೇವಾಲಯದ ಒಡೆಯನಿಗೆ) ಮದುವೆಮಾಡಿಕೊಟ್ಟು ತಾವು ಶ್ರೀರಂಗನಾಥನಿಗೆ ಮಾವನಾದರು—"ಶ್ವಶುರಮಮರವಂದ್ಯಂ ರಂಗನಾಥಸ್ಯ ಸಾಕ್ಷಾತ್"

"ವಾರಣ ಮಾಯಿರಮ್" ಎಂಬ ಪದ್ಯದಲ್ಲಿ ಹೇಳಿಕೊಂಡಿರುವ ಕನ್ನೆಯ ಬಯಕೆಯೆಲ್ಲಾ ಆಂಡಾಳಿಗೆ ಅನುಭವಸಿದ್ಧವಾಯಿತು. ಈಕೆಯ ವಿಷಯವಾಗಿ ಶ್ರೀ ವೇದಾಂತ ದೇಶಿಕರು "ಶ್ರೀ ಗೋದಾಸ್ತುತಿ"ಯೆಂಬ ಸ್ತೋತ್ರಮಾಲಿಕೆಯನ್ನು ಬಹು ಸರಳವಾದ ಸಂಸ್ಕೃತ ಶ್ಲೋಕಗಳಲ್ಲಿ ರಚಿಸಿದ್ದಾರೆ. ವಿಜಯನಗರದ ಕೃಷ್ಣದೇವರಾಯನು ತೆಲಗಿನಲ್ಲಿ "ಆಮುಕ್ತ ಮಾಲ್ಯದ" ಎಂಬ ಗ್ರಂಥವನ್ನು ಬರೆದು, ಅದರಲ್ಲಿ ಆಂಡಾಳ ದಿವ್ಯ ಚರಿತ್ರೆಯನ್ನು ಹೇಳಿದ್ದಾನೆ.

**ತೊಣ್ಡರಡಿಪ್ಪೊಡಿಯಾಳ್ವಾರು.**—ಇವರ ಸಂಸ್ಕೃತದ ಹೆಸರು "ಭಕ್ತಾಂಘ್ರಿರೇಣು" ಎಂದು. ಭಕ್ತರ ಪಾದಧೂಳಿಯೆಂದರ್ಥ. ಇವರಿಗೆ ವಿಪ್ರನಾರಾಯಣರೆಂಬ ಹೆಸರೂ ಉಂಟು. ತಂಜಾವೂರು ಜಿಲ್ಲೆಯ ಮಣ್ಡಙ್ಗುಡಿಯೆಂಬೆಡೆಯಲ್ಲಿ ಕ್ರಿ. ಶ. ಎಂಟನೆಯ ಶತಮಾನದಲ್ಲಿ ಹುಟ್ಟಿದರು. ತಿರುಮಙ್ಗೈಯಾಳ್ವಾರ ಸಮಕಾಲೀನರು. ಜಾತಿ

ಯಲ್ಲಿ ಬ್ರಾಹ್ಮಣರು. ಶ್ರೀರಂಗದ ಸಮೀಪದಲ್ಲಿ ತಿರುಕ್ಕರಮ್ಬನೂರಿನಲ್ಲಿ ಹೂತೋಟಮಾಡಿ ದೇವರಿಗೆ ಪುಷ್ಪಕೈಂಕರ್ಯ ನಡಸುತ್ತಿದ್ದರು. ಆ ತೋಟಕ್ಕೆ ಹೂಕೊಯ್ಯಲು ಬಂದ ದೇವದೇವಿಯೆಂಬ ವೇಶ್ಯೆಯ ಮೋಹಪಾಶಕ್ಕೆ ಒಳಗಾಗಿ, ಕಡೆಗೆ ಇವರಿಗೆ ಜ್ಞಾನೋದಯವಾಯಿತು. ಹೆಣ್ಣು ಹೊನ್ನು ಮಣ್ಣೆಂಬ ಮೂರಾಸೆಗಳಲ್ಲಿ ವಿರಕ್ತಿ ಹುಟ್ಟಿತು. ಆಗ ತಾವು ಮಾಡಿದ ತಪ್ಪನ್ನೊಪ್ಪಿಕೊಂಡು ರಂಗನಾಥನ ಭಕ್ತರ ಪಾದಧೂಳಿ ಯಾದರು. ಜಾತಿಯ ಹಿರಿಮೆಗಿಂತ ಅರಿವಿನ ಹಿರಿಮೆ ಶ್ರೇಷ್ಠವಾದು ದೆಂದು ಇವರಷ್ಟು ನಿರ್ಭರವಾಗಿ, ನಿರ್ದಾಕ್ಷಿಣ್ಯವಾಗಿ ಹೇಳಿರುವವರು ಮತ್ತಾರೂ ಇಲ್ಲ. ಇವರು ಭಗವಂತನನ್ನು ವಿವಿಧ ರೀತಿಗಳಲ್ಲಿ ಅನುಭವಿಸಿ ಅದರಿಂದುಂಟಾದ ಭಕ್ತ್ಯತಿಶಯವನ್ನು "ತಿರುಮಾಲೈ", "ತಿರುಪ್ಪಳ್ಳಿ ಯೆಟುಚ್ಚಿ—ಎಂಬ ಪದ್ಯಗಳಲ್ಲಿ ಹಾಡಿದ್ದಾರೆ. "ತಿರುಮಾಲೈ" ೪೫ ಪಾಶುರಗಳುಳ್ಳ ಸಿರಿಮಾಲೆ.

"ಪಚ್ಚೈಮಾಮಲೈ ಪೋಲ್ ಮೇನಿ ಪವಳವಾಯ್ ಕಮಲಚ್ಚೆಙ್ಗಣ್
ಅಚ್ಚುದಾ ಅಮರರೇಱೇ ಆಯರ್ ತಙ್ಗೊೞುನ್ದೇಯೆನ್ನುಮ್
ಇಚ್ಚುವೈ ತವಿರಯಾನ್ ಪೋಯ್ ಇನ್ದಿರಲೋಕಮಾಳುಮ್
ಅಚ್ಚುವೈ ಪೆಱಿನುಮ್ ಯಾನ್ ವೇಣ್ಡೇನ್ ಅರಙ್ಗಮಾನಗರುಳಾನೇ"

ಎಂಬ ಪಾಶುರದಲ್ಲಿ ಆೞ್ವಾರು ಹೊನ್ನಾಸೆಯಲ್ಲಿ ತಮಗಿದ್ದ ವಿರಕ್ತಿ ಮನ ಮುಟ್ಟುವಂತೆ ಹೇಳಿಕೊಂಡಿದ್ದಾರೆ. ಈ ಪದ್ಯ ಬಹು ಸೊಗಸಾದುದು. ಇದನ್ನು ತಮಿಳುನಾಡಿನಲ್ಲಿ ಹಾಡದವರೇ ವಿರಳ. ಮತ್ತೊಂದು ಪಾಶುರ ದಲ್ಲಿ—

"ಊರಿಲೇನ್ ಕಾಣಿಯಿಲ್ಲೈ ಉಱವು ಮಱ್ಱೊರುವರಿಲ್ಲೈ"

[ಊರುಕೇರಿಗಳಿಲ್ಲ ಭೂಮಿಕಾಣಿಗಳಿಲ್ಲ ನೆಂಟರಿಷ್ಟರೆನಗಿಲ್ಲ]

ಎಂದು ಬಾಯುಳಿದು ಪಳವಿಸುವುದನ್ನು ಕಂಡರೆ ಯಾರಿಗೆ ತಾನೆ ಮನ ಕರಗದು?

ಇವರ 'ತಿರುಪ್ಪಳ್ಳಿಯೆಟುಚ್ಚಿ'ಯಲ್ಲಿ ೧೧ ಪಾಶುರಗಳಿವೆ. ಇದಕ್ಕೆ ಸಂಸ್ಕೃತದಲ್ಲಿ ಪ್ರಾಬೋಧಕೀ ಸೂಕ್ತಿಯೆನ್ನುತ್ತಾರೆ. ಈ ಸಂಸ್ಕೃತಾನು ವಾದವೂ ಬಹಳ ಸರಳವಾಗಿ ಶ್ರಾವ್ಯವಾಗಿದೆ. "ತಿರುಪ್ಪಳ್ಳಿಯೆಟುಚ್ಚಿ"

ಎಂದರೆ ಉದಯರಾಗದ ಗೀತೆ. ಇದರಲ್ಲಿ ಕೆಲವು ಪದ್ಯಗಳನ್ನು "ಶ್ರೀನಿವಾಸರು" ಕನ್ನಡಿಸಿದ್ದಾರೆ.

**ತಿರುಪ್ಪಾಣಾಳ್ವಾರು.**— ಚೋಳ ರಾಜಧಾನಿಯಾಗಿದ್ದ ಉಱೈಯೂರಿನಲ್ಲಿ ಅಂತ್ಯಕುಲದಲ್ಲಿ ಹುಟ್ಟಿದರು. ಮನೆಮನೆಗೆ ಹೋಗಿ ಪದಹಾಡಿ ಭಿಕ್ಷೆಯೆತ್ತಿ ಜೀವನ ಜರುಗಿಸುವ "ಪಾಣರ್" ವಂಶಜರು. ಇವರ ಕಾಲ ಸುಮಾರು ಕ್ರಿ. ಶ. ೮ನೆಯ ಶತಮಾನ. ಇವರಿಗೆ ವೀಣಾ ಗಾನದಲ್ಲಿ ಅದ್ವಿತೀಯ ಪಾಂಡಿತ್ಯ. ಇದಕ್ಕೆ ಸಮ ಸಮವಾಗಿ ಭಗವದ್ಭಕ್ತಿ ಬೇರೂರಿತ್ತು. ಇದರಿಂದ ಶ್ರೀರಂಗಕ್ಷೇತ್ರದಲ್ಲಿ ಕಾವೇರಿಯ ತೆಂಕಣ ಕರೆಯಲ್ಲಿ ಗುಡಿಸಲು ಕಟ್ಟಿಕೊಂಡು ಭಗವಂತನ ಮಹಾ ಮಹಿಮೆಯನ್ನು ಹೊಗಳಿ ಹಾಡುತ್ತ ಕಾಲಕಳೆಯುತ್ತಿದ್ದರು. ನಿರಪರಾಧಿಯಾಗಿದ್ದರೂ ಅಂತ್ಯ ಕುಲದಲ್ಲಿ ಜನಿಸಿದ್ದೇ ಒಂದು ಕಾರಣವಾಗಿ ಜನರ ಉಪಟಳಕ್ಕೆ ತುತ್ತಾದರು. ಕಡೆಗೆ ಶ್ರೀರಂಗನಾಥನ ಅಪ್ಪಣೆಯ ಪ್ರಕಾರ ಉತ್ತಮ ಕುಲಜರಾದ ಲೋಕಸಾರಂಗ ಮುನಿಗಳ ಹೆಗಲ ಮೇಲೆ ಕುಳಿತು ಶ್ರೀರಂಗ ದೇವಾಲಯವನ್ನು ಹೊಕ್ಕು ರಂಗನಾಥನನ್ನು ಆಪಾದಮಸ್ತಕವಾಗಿ ಕಣ್ಣಾರ ಕಂಡು ಆನಂದಿಸಿ ಭಕ್ತಿಯ ಆವೇಶದಲ್ಲಿ "ಅಮಲನಾದಿಪಿರಾನ್" ಎಂಬ ಹತ್ತು ಪಾಶುರಗಳುಳ್ಳ ಮಂಗಳಾಸನ ಹಾಡಿದರು. "ಇವನನ್ನು ಕಂಡ ಕಣ್ಣುಗಳು ಮತ್ತೊಂದನ್ನೂ ಕಾಣವು" ಎಂದು ತಮ್ಮ ಪದ್ಯ ಮಾಲಿಕೆಯ ಕಡೆಯಲ್ಲಿ ನಿರ್ಧರಿಸಿಬಿಟ್ಟರು.

ಇವರ ದಿವ್ಯ ಜೀವನವನ್ನು "ಶ್ರೀನಿವಾಸ"ರು ತಿರುಪ್ಪಾಣಿಯೆಂಬ ಕನ್ನಡರೂಪಕವಾಗಿ ರಚಿಸಿ ಕನ್ನಡಿಗರಿಗೆ ಮಹೋಪಕಾರ ಮಾಡಿದ್ದಾರೆ. ಈ ಆಳ್ವಾರ ಗ್ರಂಥವನ್ನು ಕನ್ನಡಿಸಿದ್ದಾರೆ.

**ತಿರುಮಙ್ಗೈಯಾಳ್ವಾರು.**—ಇವರ ಮುಂಚಿನ ಹೆಸರು ನೀಲ. ಕಳ್ಳರ ಕುಲಕ್ಕೆ ಸೇರಿದವರು. ಬೇಡರ ಗುಂಪಿನವರು. ತಂದೆಯಂತೆಯೇ ಚೋಳ ರಾಜನಿಗೆ ಸೈನ್ಯಾಧಿಪತಿಯಾಗಿದ್ದರು. ಚೋಳನ ವಿಜಯಯಾತ್ರೆ ಗಳಲ್ಲಿ ನೆರವಾಗಿ ಧೈರ್ಯಸಾಹಸಗಳನ್ನು ಮೆರೆದು ರಾಜನ ಮೆಚ್ಚನ್ನು ಸಂಪಾದಿಸಿ ತಿರುವಾಲಿನಾಡಿಗೆ ಪಾಳಯಗಾರರಾಗಿದ್ದರು. ಇವರು ಮೊದಲಿಗೆ ಒಳ್ಳೆಯ ರಸಿಕ ಶಿಖಾಮಣಿ. ಸಂಗೀತ, ನೃತ್ಯ, ನಾಟಕ,

ಕವಿತೆಗಳಲ್ಲಿ ಬಹಳ ಸಮರ್ಥರಾಗಿದ್ದರು. ಐಹಿಕವೆಂದರೆ ಎತ್ತಿದ ಕೈ. ತಿರುವಾಳಿಯ ತಿರುವೆಳ್ಳಕ್ಕುಳದ ಸಮೀಪದಲ್ಲಿ ದೊರೆತ ಕುಮುದವಲ್ಲಿ ಯನ್ನು ಮದುವೆಯಾಗುವುದಕ್ಕಾಗಿ ತನ್ನ ಮತವನ್ನು ಬದಲಾಯಿಸಿ ಕೊಳ್ಳಲೂ ಹಿಂಜರಿಯಲಿಲ್ಲ. ವೈಷ್ಣವನಾದರೂ ಆಕೆ ಹೇಳಿದ ಮಾತಿಗೆಲ್ಲ ಒಪ್ಪಿ ಅವಳನ್ನು ಮದುವೆಯಾದರು. ಕಾಲಕ್ರಮದಲ್ಲಿ ತಮ್ಮ ಅಧಿಕಾರ, ಹಣಕಾಸು ಎಲ್ಲವೂ ಹೋಗಿ ಬರಿಗೈಯಾಗಲು ಕಳ್ಳತನವೆಂಬ ಕಾಮಧೇನು ವನ್ನು ನಂಬಿ ದರೋಡೆಕಾರರಾದರು. ದಾರಿಹೋಕರ ತಲೆಯೊಡೆದು ಅವರ ಸರ್ವಸ್ವವನ್ನೂ ಸುಲಿದುಕೊಳ್ಳುವುದೇ ತಿರುಮಂಗೈಯ ಕಸಬಾ ಯಿತು. ಒಂದು ದಿನ ಲಕ್ಷ್ಮೀನಾರಾಯಣರು ಮದುವಣಿಗರ ವೇಷ ತಾಳಿ ಆ ಮಾರ್ಗವಾಗಿ ಬಂದು ತಿರುಮಂಗೈಗೆ ಬುದ್ಧಿ ಕಲಿಸಿದರು. ನಾರಾಯಣ ಮಂತ್ರದ ಮಹಿಮೆಯನ್ನು ತಿಳಿಸಿದರು. ಆೞ್ವಾರಿಗೆ ಜ್ಞಾನೋದಯವಾಯಿತು. ಆ ಭಕ್ತಿಯ ಆವೇಶದಲ್ಲಿ—

"ಕೋಡಿಯ ಮನತ್ತಾಲ್ ಶಿನತ್ತೊೞಿಲ್ ಪುರಿನ್ದು
ತಿರಿನ್ದು ನಾಯಿನತ್ತೊಡುಮ್ ತಿಳೈತ್ತಿಟ್ಟು
ಓಡಿಯುಮ್ ಉೞನ್ಱು ಉಯಿರ್ಗಳ್ಕೊನ್ಱೇನ್
ಉಣರ್ವಿಲೇನ್ ಆದಲಾಲ್ ನಮನಾರ್
ಪಾಡಿಯ್ಯಪ್ಪೆರಿದುಮ್ ಪರಿಶೞಿತ್ತಿಟ್ಟೇನ್
ಪರಮನೇ ಪಾಱ್ಕಡಲ್ ಕಿಡನ್ದಾಯ್
ನಾಡಿನಾನ್ ವನ್ದು ಉನ್ ತಿರುವಡಿಯಡೈನ್ದೇನ್
ನೈಮಿಶಾರಣಿಯತ್ತುಳೆನ್ದಾಯ್"

ಎಂಬ ಪದ್ಯದಲ್ಲಿ ತಮ್ಮ ಅಕಾರ್ಯಗಳಿಗಾಗಿ ಪಶ್ಚಾತ್ತಾಪಪಟ್ಟುಕೊಂಡು ನಾರಾಯಣಮಂತ್ರವು ತಮಗೆ ಸಂಸಾರತಾರಕವಾದುದನ್ನು ತಮ್ಮ ಪೆರಿಯ ತಿರುಮೊೞಿಯಲ್ಲಿ ಹೇಳಿದ್ದಾರೆ. ಅನಂತರ ತಾವು ಸಂಪಾದಿಸಿದ ಹಣ ವನ್ನೆಲ್ಲ ಶ್ರೀರಂಗದ ದೇವಾಲಯದ ನಿರ್ಮಾಣಕಾರ್ಯದಲ್ಲಿ ವಿನಿಯೋಗಿ ಸಿದರೆಂಬ ಪ್ರತೀತಿಯಿದೆ. ತಮಿಳುನಾಡಿನಲ್ಲಿ ಕೋಯಿಲ್ ಯೆಂದರೆ ಶ್ರೀರಂಗದ ಭವ್ಯ ದೇವಾಲಯಕ್ಕೇ ಇಂದಿಗೂ ಅನ್ವಯಿಸುತ್ತದೆ. ಈ ಮಹತ್ಕೈಂಕರ್ಯಕ್ಕೆ ತಿರುಮಂಗೈಯಾೞ್ವಾರೇ ಮುಖ್ಯ ಕಾರಣರು.

ಇವರು ಮಹಾಕವಿ. ಭಗವದ್ಭಕ್ತರು. ನಮ್ಮಾಳ್ವಾರನ್ನು ಬಿಟ್ಟರೆ ವಿಪುಲವಾಗಿ ಪ್ರಬಂಧರಚನೆ ಮಾಡಿದವರೆಂದರೆ ತಿರುಮಂಗೈಯಾಳ್ವಾರು. ಪೆರಿಯ ತಿರುಮೊೞಿ ೧೦೮೪ ಪಾಶುರ; ತಿರುಕ್ಕುರುನ್ದಾಣ್ಡಗಮ್ ೨೦ ಪದ್ಯ; ತಿರುನೆಡುನ್ದಾಣ್ಡಗಮ್ ೩೦ ಪದ್ಯ; ಶಿಱಿಯ ತಿರುಮಡಲ್ ೪೦ ಪಾಶುರಗಳು; ಪೆರಿಯ ತಿರುಮಡಲ್ ೭೮ ಪಾಶುರಗಳು; ತಿರುವೆೞುಕೂಱ್ಱಿರುಕ್ಕೈ ೧ ಪಾಶುರ ಒಟ್ಟು ೧೨೫೩ ಪಾಶುರಗಳುಳ್ಳ ದಿವ್ಯ ಪ್ರಬಂಧವನ್ನು ರಚಿಸಿದ್ದಾರೆ. ಶೈವಸಮಯಾಚಾರ್ಯರಾದ ತಿರುನಾವುಕ್ಕರಸರು "ತಾಣ್ಡಗ"ವೆಂಬ ಪದ್ಯ ಜಾತಿಯನ್ನು ರಚಿಸಿ "ತಾಣ್ಡಗವೇನ್ದು" ಎಂಬ ಪ್ರಶಸ್ತಿ ಪಡೆದಿರುವಂತೆ, ಆೞ್ವಾರುಗಳಲ್ಲಿ ತಿರುಮಂಗೈಯಾೞ್ವಾರು ಎರಡು "ತಾಣ್ಡಗ"ಗಳನ್ನು ಹಾಡಿದ್ದಾರೆ. ಇವರು "ಆಶು, ಮಧುರಮ್, ಚಿತ್ರಮ್, ವಿಸ್ತಾರಮ್" ಎಂಬ ನಾಲ್ಕು ವಿಧವಾದ ಪದ್ಯರಚನೆಯಲ್ಲಿ ಹೆಸರು ಪಡೆದು "ನಾಱ್ಕವಿ ಪೆರುಮಾಳ್" ಎಂಬ ಪ್ರಶಸ್ತಿಗೆ ಪಾತ್ರರಾಗಿದ್ದಾರೆ. ಇವರ ಪಾಶುರಗಳಲ್ಲಿ ಕೆಲವನ್ನು "ಶ್ರೀನಿವಾಸ"ರು ಕನ್ನಡಕ್ಕೆ ಅನುವಾದಮಾಡಿದ್ದಾರೆ.

## ಮಧ್ಯಕಾಲದ ಕವಿಗಳು

**ಶೇಕ್ಕಿಪಾರ್.**—ವೆಳ್ಳಾಳ ಕುಲದ ಶೇಕ್ಕಿೞಾರ್ ವಂಶದಲ್ಲಿ ಮದರಾಸಿನ ಸಮೀಪದ ಕುನ್ದ್ರತ್ತೂರಿನಲ್ಲಿ ಹುಟ್ಟಿದರು. ಇವರ ಮೊದಲಿನ ಹೆಸರು ಅರುಳ್‌ಮೊೞಿತ್ತೇವರ್. ಅನಪಾಯ ಅಥವಾ ಕುಲೋತ್ತುಂಗ ಚೋಳನ ಕಾಲದಲ್ಲಿ (ಅಂದರೆ ಕ್ರಿ. ಶ. ೧೦೬೪–೧೧೧೩) ಇದ್ದರೆಂಬುದಕ್ಕೆ ಗ್ರಂಥಸ್ಥವಾದ ಆಧಾರಗಳಿವೆ. ಅನಪಾಯ ಚೋಳನಿಗೆ ಇವರು ಮಂತ್ರಿಯಾಗಿದ್ದರು. "ಉತ್ತಮ ಚೋಳ ಪಲ್ಲವರಾಯರ್" ಎಂಬ ಪ್ರಶಸ್ತಿ ಇವರಿಗಿತ್ತು. ಇವರ ಆಶ್ರಯದಾತನಾದ ಅನಪಾಯನು ಜೀವಕಚಿನ್ತಾಮಣಿಯೆಂಬ ಜೈನಕಾವ್ಯವನ್ನೇ ಓದುತ್ತಿದ್ದುದನ್ನು ಕಂಡು ಬುದ್ಧಿಹೇಳಿ ಅವನಿಗಾಗಿ "ಪೆರಿಯಪುರಾಣ"ವೆಂಬ ಶೈವಗ್ರಂಥವನ್ನು ಬರೆದರು. ಅರುವತ್ತುಮೂವರು ಪುರಾತನರ ಚರಿತ್ರೆಯೇ ಈ ಗ್ರಂಥದ

ವಸ್ತು. ಇದರಲ್ಲಿ ೪೨೮೬ ಪದ್ಯಗಳಿವೆ. ಇದಕ್ಕೆ "ತಿರುತ್ತೊಣ್ಡರ್ ಪುರಾಣಮ್" ಎಂಬ ಇನ್ನೊಂದು ಹೆಸರುಂಟು.

**ಕಮ್ಬರ್.**—ಸುಮಾರು ಕ್ರಿ. ಶ. ೯ನೆಯ ಶತಮಾನದಲ್ಲಿ ಇದ್ದಿರಬಹುದು. ಕೆಲವರು ೧೨ನೆಯ ಶತಮಾನದಲ್ಲಿ ಇದ್ದಿರಬಹುದೆಂದು ಅಭಿಪ್ರಾಯಪಡುತ್ತಾರೆ. ತಂಜಾವೂರು ಜಿಲ್ಲೆಯ ತೇರಟುನ್ದೂರಿನಲ್ಲಿ ಹುಟ್ಟಿದರು. ಉವಚ್ಚರ್ ಕುಲದವರು. ತಿರುವೆಣ್ಣೈನಲ್ಲೂರಿನ ಶಡಯಪ್ಪ ಮುದಲಿಯಾರು ಇವರಿಗೆ ಆಶ್ರಯದಾತರು. ಇವರ ಗ್ರಂಥವಾದ ಕಂಬ ರಾಮಾಯಣದಲ್ಲಿ ಹಲವು ಸಂದರ್ಭಗಳಲ್ಲಿ ತಮ್ಮ ಆಶ್ರಯದಾತನ ದಾತೃತ್ವವನ್ನು ಸ್ಮರಿಸಿದ್ದಾರೆ. ಇವರು ವರ ಕವಿ. ಕಾಳಿಯ ವರಪ್ರಸಾದದಿಂದ ವಾಕ್ಶಕ್ತಿಯನ್ನು ಪಡೆದರು. ಇವರಾಡಿದ ಅನುಗ್ರಹವಾಗಲಿ ಆಗ್ರಹವಾಗಲಿ ಸುಳ್ಳಾಗುತ್ತಿರಲಿಲ್ಲವೆಂಬುದಕ್ಕೆ ಹಲವಾರು ದಂತಕಥೆಗಳಿವೆ. ಇವರು ತಮ್ಮ ಕವಿತಾಶಕ್ತಿಯ ಪ್ರಭಾವದಿಂದ ಶಡಯಪ್ಪ ಮುದಲಿಯಾರ ಮೂಲಕವಾಗಿ ಉರೈಯೂರಿನಲ್ಲಿ ಆಳುತ್ತಿದ್ದ ಕುಲೋತ್ತುಂಗ ಚೋಳನ ಆಸ್ಥಾನಕವಿಯಾಗಿ, ಕಂಬರಾಮಾಯಣವೆಂಬ ವಿಪುಲವಾದ ಉದ್ಗ್ರಂಥವನ್ನು ರಚಿಸಿ 'ಕವಿಚಕ್ರವರ್ತಿ' ಪ್ರಶಸ್ತಿಯನ್ನು ಪಡೆದರು. ಸಮಕಾಲೀನನಾಗಿದ್ದ ಒಟ್ಟಕ್ಕೂತ್ತನಿಗೂ ಇವರಿಗೂ ಕವಿತಾಶಕ್ತಿಯಲ್ಲಿ ಪಂಥಬೀಳಲು ಕಂಬರೇ ಜಯಶಾಲಿಯಾದರು. ವಾಲ್ಮೀಕರು ೨೪ ಸಾವಿರ ಶ್ಲೋಕಗಳುಳ್ಳ ರಾಮಾಯಣವನ್ನು ರಚಿಸಿದಂತೆ, ಕಂಬರೂ ೧೨ ಸಾವಿರ ಪದ್ಯಗಳುಳ್ಳ ಉದ್ಗ್ರಂಥವನ್ನು ಬರೆದು ತಮಿಳು ಸಾಹಿತ್ಯ ಭಂಡಾರಕ್ಕೆ ಅತ್ಯಮೌಲ್ಯ ರತ್ನಗಳನ್ನು ತುಂಬಿದ್ದಾರೆ. ಆದರೂ ಇವರಿಗೆ ತಾನು ವಾಲ್ಮೀಕಿ ಮಹರ್ಷಿಗಳ ಸಮವೆಂದು ಹೇಳಿಕೊಳ್ಳುವಷ್ಟು ಹೆಮ್ಮೆಯಿಲ್ಲ. ತಮ್ಮ ರಾಮಾಯಣದ ಪೀಠಿಕೆಯಲ್ಲಿ ಸ್ವಾಹಂಕಾರಖಂಡನೆಮಾಡಿಕೊಳ್ಳುತ್ತ ತಾನು ವಾಲ್ಮೀಕಿಯ ರಾಮಾಯಣವೆಂಬ ಹಾಲ್ಗಡಲನ್ನು ನೆಕ್ಕಿ ಕುಡಿಯಲು ಬಂದ ಬೆಕ್ಕು ಎಂದುಕೊಳ್ಳುತ್ತಾರೆ. ಇದು ಹಿರಿಯರ ಹಿರಿಮೆ. ತಮಿಳುನಾಡಿನಲ್ಲಿ ಕವಿಚಕ್ರವರ್ತಿ ಕಂಬರೆಂದರೆ ಎಲ್ಲರಿಗೂ ಗೊತ್ತು. ಅವರ ಕಲ್ಪಿ, ಹಿರಿಮೆ, ಕವಿತಾಶಕ್ತಿಗಳನ್ನು ಕುರಿತು ಹಲವಾರು ಗಾದೆಗಳು ಹುಟ್ಟಿವೆ:

